This approach of accommodating the results of सगुणविद्या and निर्गुणविद्या as delineated in this chapter was probably inevitable because of the presentation of the items like उत्क्रान्ति, गति etc. by Sūtrakāra. However, this defeats the very purpose of developing ब्रह्मभावाविर्भाव as the single final goal on firm footing. The endevour made all along the Bhāṣya by introducing निर्गुणब्रह्म doctrine wherever possible becomes inconsistant if ब्रह्मभावाविर्भाव is not presented as a single final goal in the concluding chapter. However, it is a problem for the advaita commentators to solve.

In the course of the long introductions added to the seven volumes of this great work viz. Brahmasūtra bhāṣya of Śrī Ānandatīrtha all essential points of Dvaita philosophy presented in Brahmasūtra are explained. The guide-line underlying the arrangement of adhyāya, pāda and adhikaraṇa are also explained. The cantrel theme of Brahmasūtras is stated in the very first sūtra अथातो ब्रह्मजिज्ञासा Śrī Vyāsatīrtha neetly puts the import of this sūtra as

अथ शब्देनाधिकारमत इत्यमुना फलम्
ब्रह्मशब्देन विषयं सूचयामास सूत्रकृत्

The central theme of Brahmasūtras viz. Brahman is conceived as गुणपरिपूर्ण by Sūtrakāra as suggested by the very etymology of the word ब्रह्मन्. बृहन्तोहि अस्मिन् गुणाः. This गुणपरिपूर्ण is substantiated by the समन्वय of all words in Brahman in the first chapter. Each word conveys an attribute and its समन्वय indicates that Brahman posseses that attribute. Brahman has infinite number of attributes. Even if all available वैदिक and लौकिक words are utilised the statement of his attributes will not be exhaustive. It is in this sense that Brahman is beyond words but not in the sense that he is attributeless i.e. निर्गुण.

If sūtrakāra has निर्गुणब्रह्मन् in mind he would not have initiated the process of समन्वय at all.

Brahman's गुणपरिपूर्णत्व is supported by stating his creatorship in the second Sūtra. His role is not confined to creation, sustainance, and distruction only. It comprises all activities and functions in the universe.

उत्पत्तिस्थिति संहाराः नियतिर्ज्ञानिमावृतिः
बन्धमोक्षौ च पुरुषात् यस्मात् स हरिरेकंराट्

Such a unique definition given by sūtrakāra in the second sūtra looses its ground if it is considered merely as तटस्थलक्षण. It has to be taking as स्वरूपलक्षण. Sūtrakāra demonstrates different aspects and implications of this definition all along the sūtras. He refutes the claims of other schools of philosophy such as वैशेषिक, जैन, बौद्ध etc which claim something other than Brahman as the cause. This clearly shows that it is स्वरूपलक्षण.

Sūtrakāra does not subscribe either to ब्रह्मपरिणाम view or ब्रह्मविवर्त view. There is no reference to the expression विवर्त in any sūtra nor this theory is particularly developed in any adhikaraṇa. There is no ground to thrust it on Sūtrakāra. The concept of avidyā which is the basis of विवर्त theory is not explictly found in any sūtra. The expression माया found in the sūtra मायामात्रं तु कार्त्स्न्येन अनभिव्यक्तस्वरूप-त्वात् does not refer to the concept of अविद्या as conceived in advaita.

As regards the nature of Jīva, Sūtrakāra specifically states that it is of atomic nature, it is distinct from Brahman, it is आभास i.e. प्रतिबिम्ब of brahman and dependent on him. The idea of Brahman

assuming the state of Jīva by the adjunct i.e. उपाधि of avidyā is not stated by Sūtrakāra in any sūtra. The idea of two levels of Brahman as सगुण and निर्गुण is also not found in the sūtras.

In the area of साधन i.e. means to attain salvation, Sūtrakāra gives utmost importance to प्रसाद i.e. the grace of God. अपरोक्षज्ञान and भक्ति are the means to elicit the grace of God and his grace is the means for liberation. In the liberated state the Jīva does not loose his identity. He is not eliminated. He discovers his true nature which is blissful nature and enjoys bliss in the proximity of God and with the grace of God.

All these points are brought out in the long introduction in English added to the seven volumes quoting the relevant sūtras. Sūtrakāras methodoloy is quite unique.

i) For each adhikaraṇa, particularly in Samanvayādhyāya, he has a śruti passage in mind, he incorporates the key word of this śruti in the concerned sūtra in majority of cases. In other cases he states the central point of the śruti. This helps us to verify whether the विषयवाक्य selected by a particular Bhāṣyakāra is the same that is intended by Sūtrakāra or different.

ii) Sūtrakāra uses the expressions स्व with references to God and इतर with reference to Jīva. He uses the expression प्रत्यक्ष and दर्शन in the sense directly stated in the śruti or in the sense of the direct experience of a sage. He uses the expression श्रुति and शब्द to refer to Veda the word स्मृति, to refer to पञ्चरात्र, महाभारत and गीता।

iii) He utilises the criteria of श्रुति, लिङ्ग etc to ditermine the meaning of vedic expressions and उपक्रम, उपसंहार etc to ditermine the

तात्पर्य i.e. the purport of the vedic passage. He draws illustration from पूर्वमीमांसा.

iv) He quotes the views of जैमिनि etc. other thinkers and reconciles their view with his view on the subject.

The above brief summary of the topics discussed in the fourth chapter and the observations on the handling of fourth adhyāya by other Bhāṣyakāras are intended to give an idea of the theme and topics of this chapter. Similar Summaries of respective chapters are added in the respective volumes.

The general observations on the central theme of Brahmasūtras and the methodology of Brahmasūtras are intended to enkindle interest in the study and research in Brahmasūtra to modern young research scholars. Dr. B.N.K. Sharma has made a detailed comparative review of the interpretation of three Bhāṣyas in his monumental work viz., A critical exposition of Brahmasūtras and their principal commentaries.

I take this opportunity to thank Dr. Krishnacharya Upadhyaya and Dr. Venkateshacharya for their help in editing this work.

Mahāmahopādhyāya
**Prof. K.T. Pandurangi**

## ಚತುರ್ಥಾಧ್ಯಾಯದ ಪ್ರಥಮ ಪಾದ

ಇದು ನಾಲ್ಕನೆಯ ಅಧ್ಯಾಯ. ಇದನ್ನು ಫಲಾಧ್ಯಾಯ ಎಂದು ಕರೆಯಲಾಗಿದೆ. ಇಲ್ಲಿ ಫಲವನ್ನು ಹೇಳಿದ್ದಾರೆ. ಫಲ ಎಂದರೆ ಮೋಕ್ಷ. ಅದು ನಾಲ್ಕು ತರಹದ್ದು. 1.ಕರ್ಮಕ್ಷಯ 2.ಉತ್ಕ್ರಾಂತಿ 3.ಮಾರ್ಗ4.ಭೋಗ ಎಂದು. ನಾಲ್ಕನೆಯ ಅಧ್ಯಾಯದ ಮೊದಲನೇ ಪಾದದಲ್ಲಿ ಕರ್ಮಕ್ಷಯವನ್ನು ಪ್ರಧಾನವಾಗಿ ಹೇಳಲಾಗಿದೆ. ಕರ್ಮಕ್ಷಯ ಎಂದರೆ ಸಂಚಿತವಾದ ಅನಿಷ್ಟಪುಣ್ಯ ಮತ್ತು ಪಾಪಗಳ ಕ್ಷಯ. ಇದರಿಂದ ಜ್ಞಾನಿಗಳಿಗೆ ಕರ್ಮನಿಮಿತ್ತವಾದ ದುಃಖವು ಆಗುವದಿಲ್ಲ. ಈ ಅವಸ್ಥೆಯನ್ನೇ ಜೀವನ್ಮುಕ್ತಿ ಎಂದು ಕರೆಯಲಾಗಿದೆ. ಈ ಪಾದದಲ್ಲಿ ಒಟ್ಟು ಎಂಟು ಅಧಿಕರಣಗಳು.

1. ಆವೃತ್ತ್ಯಧಿಕರಣ
2. ಆತ್ಮೋಪಗಮಾಧಿಕರಣ
3. ನ ಪ್ರತೀಕಾಧಿಕರಣ
4. ಬ್ರಹ್ಮದೃಷ್ಟ್ಯಧಿಕರಣ
5. ಆದಿತ್ಯಾದಿಮತ್ಯಧಿಕರಣ
6. ಆಸನಾಧಿಕರಣ
7. ಪ್ರಾಯಣಾಧಿಕರಣ
8. ತದಧಿಗಮಾಧಿಕರಣ

ಇವುಗಳಲ್ಲಿ ಆವೃತ್ತ್ಯಧಿಕರಣವು ಮೊದಲನೆಯದ್ದು. ಅಲ್ಲಿ ಒಟ್ಟು ಎರಡು ಸೂತ್ರಗಳು.

### 1.ಆವೃತ್ತ್ಯಧಿಕರಣ

**1. ಓಂ ಆವೃತ್ತಿರಸಕೃದುಪದೇಶಾತ್ ಓಂ**

**2. ಓಂ ಲಿಂಗಾಚ್ಚ ಓಂ**

ಶ್ರವಣಾದಿಗಳು ಈ ಅಧಿಕರಣದ ವಿಷಯ. ಒಮ್ಮೆ ಮಾತ್ರ ಶ್ರವಣಾದಿಗಳನ್ನು ಮಾಡಬೇಕೋ ಅಥವಾ ಪುನಃ ಪುನಃ ಶ್ರವಣಾದಿಗಳನ್ನು ಮಾಡಬೇಕೋ ಎಂದು ಸಂಶಯ.ಅಗ್ನಿಷ್ಟೋಮಾದಿಗಳನ್ನು ಒಮ್ಮೆ ಆಚರಿಸುವದರಿಂದ ಫಲಪ್ರಾಪ್ತಿಯಾಗುವುದು. ಆದರೆ ಆವಘಾತಾದಿಗಳನ್ನು ಪುನಃ ಪುನಃ ಮಾಡುವದರಿಂದ ತುಷವಿಮೋಕವಾಗುವದು. ಹೀಗೆ ಎರಡು ರೀತಿಯಲ್ಲೂ ಕಂಡಿರುವುದು ಸಂಶಯ ಕಾರಣವಾಗಿದೆ.

ಜ್ಯೋತಿಷ್ಟೋಮಯಾಗವನ್ನು ಒಂದು ಬಾರಿ ಮಾಡಿದರೂ ಸ್ವರ್ಗಪ್ರಾಪ್ತಿಯಾಗುವಂತೆ ಶಾಸ್ತ್ರಶ್ರವಣಾದಿಗಳನ್ನು ಒಮ್ಮೆ ಮಾಡಿದರೆ ಸಾಕು. ಅದರಿಂದ ಬ್ರಹ್ಮದರ್ಶನವಾಗಿ ಮೋಕ್ಷವಾಗುತ್ತದೆ ಎಂದು ಪೂರ್ವಪಕ್ಷ. ಶಾಸ್ತ್ರಶ್ರವಣವನ್ನು ಒಂದು ಬಾರಿ ಮಾಡಿದರೆ ಸಾಲದು. ಸಸ್ಯಗಳಿಗೆ ನೀರುಹಾಕುವಂತೆ ಮತ್ತೆ ಮತ್ತೆ ಶಾಸ್ತ್ರಶ್ರವಣ ಮಾಡುತ್ತಿರಬೇಕು ಎಂಬುದು ಸಿದ್ಧಾಂತ. ಅದಕ್ಕೆ ಅಸಕೃದುಪದೇಶಾತ್ ಎಂದು ಕಾರಣವನ್ನು ಕೊಡಲಾಗಿದೆ. ಉದ್ದಾಲಕರು ಶ್ವೇತಕೇತುವಿಗೆ ಒಂಭತ್ತು ಬಾರಿ ಉಪದೇಶಮಾಡಿದ್ದಾರೆ. ಅಂದರೆ ಶ್ವೇತಕೇತು ಅನೇಕಬಾರಿ ಶ್ರವಣ ಮಾಡಿದ್ದಾನೆ ಎಂದು. ಉಪನಿಷತ್ತಿನಲ್ಲಿ ಭೃಗುಋಷಿಯು ತನ್ನ ತಂದೆಯಾದ ವರುಣನಲ್ಲಿ ಮತ್ತೆ ಮತ್ತೆ ಶ್ರವಣ ಮಾಡಿದ ಎಂದು ಹೇಳಲಾಗಿದೆ. ಈ ಕಾರಣದಿಂದಾಗಿಯೂ ಶ್ರವಣಾದಿಗಳ ಆವೃತ್ತಿಯನ್ನು ಮಾಡಬೇಕು.

## 2.ಆತ್ಮೋಪಗಮಾಧಿಕರಣ

ಇದು ಏಕಸೂತ್ರಾಧಿಕರಣ.

**ಓಂ ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ಓಂ**

ಈ ಅಧಿಕರಣದಲ್ಲಿ ಆತ್ಮಾ ಎಂಬ ಉಪಾಸನೆಯನ್ನು ಸದಾ ಮಾಡುತ್ತಿರಬೇಕು ಎಂದು ಹೇಳಲಾಗಿದೆ.

ಆತ್ಮತ್ವವೇ ಈ ಅಧಿಕರಣದ ವಿಷಯ. ಆತ್ಮತ್ವೋಪಾಸನೆ ಹಾಗೂ ಉಪದೇಶಗಳು ನಿತ್ಯದಲ್ಲಿ ಮಾಡಬಾರದೋ ಮಾಡಬೇಕೋ ಎಂದು ಸಂದೇಹ. ಉಪಾಸನೆಯು ನಿತ್ಯದಲ್ಲಿ ಮಾಡಬೇಕಾಗಿರುವುದು ಮತ್ತು ಉಪಾಸನೆಮಾಡದಿದ್ದರೆ ಇತರ ಗುಣಗಳ ಸಮಾನತೆಯೂ ಸಂಶಯಕ್ಕೆ ಕಾರಣ. ಆತ್ಮತ್ವೋಪಾಸನೆ ಹಾಗೂ ಉಪದೇಶಗಳು ನಿತ್ಯದಲ್ಲಿ ಮಾಡಬಾರದು. ಸ್ವಾಮಿತ್ವರೂಪವಾದ ಆತ್ಮತ್ವವು ಯಾವಾಗಲೂ ಪ್ರಸಿದ್ಧವೇ ಆಗಿದೆ. ಪ್ರಸಿದ್ಧವಾದದ್ದು ಯಾವಾಗಲೂ ಎಲ್ಲರ ಮನಸ್ಸಿನಲ್ಲಿ ಇದ್ದೇ ಇರುತ್ತದೆ ಕಾರಣ ಅವುಗಳನ್ನು ಮತ್ತೆ ಮಾಡುವದು ವ್ಯರ್ಥ ಎಂದು ಪೂರ್ವಪಕ್ಷ. ಆತ್ಮೇತ್ಯುಪಾಸನಂ ಕಾರ್ಯಂ ಇತ್ಯಾದಿ ಪ್ರಮಾಣವಚನಗಳು ಶ್ರೀಹರಿಯು ನನ್ನ ಸ್ವಾಮಿಯು ಎನ್ನುವ ಉಪಾಸನೆ ಹಾಗೂ ಉಪದೇಶಗಳು ಮೋಕ್ಷಕ್ಕೆ ಹೇತುಗಳೆಂದು ತಿಳಿಸುತ್ತವೆ ಆದ್ದರಿಂದ ಆತ್ಮತ್ವೋಪಾಸನೆಯನ್ನು ನಿತ್ಯದಲ್ಲಿ ಮಾಡಲೇಬೇಕು ಎಂದು ಸಿದ್ಧಾಂತ.

## 3.ನ ಪ್ರತೀಕಾಧಿಕರಣ

ಇದು ಏಕಸೂತ್ರಾಧಿಕರಣ

**ಓಂ ನ ಪ್ರತೀಕೇ ನ ಹಿ ಸಃ ಓಂ**

ಈ ಅಧಿಕರಣದಲ್ಲಿ ಪ್ರತೀಕ(ಪ್ರತಿಮೆ)ಮತ್ತು ಭಗವಂತನಿಗೆ ಐಕ್ಯವನ್ನು ತಿಳಿಯಬಾರದು ಎಂದು ಹೇಳಲಾಗಿದೆ.

ಭಗವಂತನ ಪ್ರತಿಮಾರೂಪವಾದ ನಾಮವಾಗಾದಿಗಳೇ ಇಲ್ಲಿ ವಿಷಯ. ನಾಮ ಬ್ರಹ್ಮೇತ್ಯುಪಾಸೀತ ಇತ್ಯಾದಿ ಉಪಾಸನಾವಾಕ್ಯಗಳಿರುವದರಿಂದ ಪ್ರತೀಕವಾದ ನಾಮಾದಿಗಳಲ್ಲಿ ಪರಮಾತ್ಮನ ಅಭೇದವನ್ನು ಉಪಾಸನೆಮಾಡಬೇಕೋ ಅಥವಾ ನಾಮಾದಿಗಳಲ್ಲಿ ಪರಮಾತ್ಮ ಇದ್ದಾನೆ ಎಂದು ಉಪಾಸನೆಮಾಡಬೇಕೋ ಎಂದು ಸಂದೇಹ. ಈ ಪ್ರಪಂಚವು ನಾಮರೂಪಾತ್ಮಕವಾದದ್ದು. ಇವೆಲ್ಲವನ್ನೂ ಬ್ರಹ್ಮನೆಂದು ಉಪಾಸನೆ ಮಾಡಬೇಕು ಎಂದು ಶ್ರುತಿಯಲ್ಲಿ ಹೇಳಲಾಗಿದೆ. ಇಲ್ಲಿ ನಾಮ ಬ್ರಹ್ಮ ಎಂದು ಸಾಮಾನಾಧಿಕರಣ್ಯಶ್ರುತಿ ಇರುವದರಿಂದ ನಾಮರೂಪಾತ್ಮಕವಾದ ಪ್ರತೀಕಗಳೇ ಬ್ರಹ್ಮನೆಂದು ಉಪಾಸನೆ ಮಾಡಬೇಕು ಎಂದು ಪೂರ್ವಪಕ್ಷ. ಅಚೇತನಾಸತ್ಯಾಯೋಗ್ಯಾನ್ಯನುಪಾಸ್ಯಾನ್ಯಫಲತ್ವವಿಪರ್ಯಯಾಭ್ಯಾಂ ಎಂಬ ಸಾಂಕರ್ಷಣ ಸೂತ್ರವಚನಾನುಸಾರವಾಗಿ ಹಾಗೂ ಅನುವ್ಯಾಖ್ಯಾನೋಕ್ತಪ್ರಮಾಣಗಳಿಂದಲೂ ಮಿಥ್ಯೋಪಾಸನೆಯು ಪುರುಷಾರ್ಥಕ್ಕೆ ಹೇತುವಾಗದೇ ಇದ್ದಕಾರಣ ಮಿಥ್ಯೋಪಾಸನೆಯನ್ನು ಮಾಡಬಾರದು. ಅಷ್ಟೇ ಅಲ್ಲದೇ ನಾಮಾದಿಪ್ರಾಣಪರ್ಯಂತಂ ಇತ್ಯಾದಿ ಸ್ಮೃತಿಗಳು ನಾಮದಲ್ಲಿ ಬ್ರಹ್ಮ ಇದ್ದಾನೆ ಎಂದು ಉಪಾಸನೆಯನ್ನು ಮಾಡಬೇಕು ಐಕ್ಯೋಪಾಸನೆ ಸರ್ವಥಾ ಮಾಡಬಾರದು ಎಂದು ಹೇಳುತ್ತವೆ ಕಾರಣ ನಾಮಾದಿಗಳಲ್ಲಿ ಭಗವಂತ ಇದ್ದಾನೆ ಎಂದು ಉಪಾಸನೆಮಾಡುವುದೇ ಯುಕ್ತ.

## 4. ಬ್ರಹ್ಮದೃಷ್ಟ್ಯಧಿಕರಣ

ಇದು ಏಕಸೂತ್ರಾಧಿಕರಣ

**ಓಂ ಬ್ರಹ್ಮದೃಷ್ಟಿರುತ್ಕರ್ಷಾತ್ ಓಂ**

ಈ ಅಧಿಕರಣದಲ್ಲಿ ಪರಮಾತ್ಮನನ್ನು ಬ್ರಹ್ಮ ಎಂದು ಉಪಾಸನೆಮಾಡಬೇಕು ಎಂದು ಹೇಳಲಾಗಿದೆ.

ಇಲ್ಲಿ ಪ್ರಸಕ್ತವಾದ ಬ್ರಹ್ಮತ್ವವೇ ವಿಷಯ. ಬ್ರಹ್ಮತ್ವವು ಸರ್ವಥಾ ಉಪಾಸ್ಯವೋ ಅಥವಾ ಅಲ್ಲವೋ ಎಂದು ಸಂಶಯ. ಆತ್ಮತ್ವ ಉಪಾಸನೆಯಲ್ಲಿ ಅವಶ್ಯಕತ್ವವು ಇತರ ಗುಣಗಳ ಉಪಾಸನೆಯಲ್ಲಿ ಅನಾವಶ್ಯಕತ್ವವು ಕಂಡಿದೆ ಇದೇ ಪ್ರಕೃತ ಸಂಶಯಕ್ಕೆ ಕಾರಣ.

ಮೋಕ್ಷಪ್ರಾಪ್ತಿಗಾಗಿ ಯಾವಾಗಲೂ ಬ್ರಹ್ಮತ್ವದ ಉಪಾಸನೆಯನ್ನು ಮಾಡಲೇಬೇಕಾದ ಅವಶ್ಯಕತೆ ಇಲ್ಲ. ಬೇರೆ ಅನೇಕ ಗುಣಗಳಿರುವಾಗ ಆ ಗುಣಗಳನ್ನು ಪರಿತ್ಯಜಿಸಿ ಕೇವಲ ಬ್ರಹ್ಮತ್ವದ ವಿಶೇಷ ಉಪಾಸನೆಗೆ ಕಾರಣವಿಲ್ಲ. ಹೀಗೆ ಬ್ರಹ್ಮತ್ವವು ನಿತ್ಯದಲ್ಲೂ ಸರ್ವಥಾ ಉಪಾಸ್ಯವಲ್ಲವಾದ್ದರಿಂದ ಬ್ರಹ್ಮತ್ವೋಪಾಸನೆಗೆ ಶ್ರೇಷ್ಠತೆ ಹೇಳಿದ್ದು ಯುಕ್ತವಲ್ಲ.

ಪರಮಾತ್ಮನನ್ನು ಸರ್ವದಾ ಬ್ರಹ್ಮನೆಂದು ಉಪಾಸನೆಮಾಡಬೇಕು. ಬ್ರಹ್ಮತ್ವದ ಉಪಾಸನೆ ಎಂದರೆ ಉತ್ಕೃಷ್ಟತ್ವದ ಉಪಾಸನೆ. ಬೇರೆ ಗುಣಗಳ ಉಪಾಸನೆಗಿಂತ ಸರ್ವೋತ್ಕೃಷ್ಟತ್ವದ ಉಪಾಸನೆಯು ಶ್ರೇಷ್ಠ ಆದ್ದರಿಂದ ಭಗವಂತನನ್ನು ಆತ್ಮನೆಂದು ಉಪಾಸನೆಮಾಡವಾಗಲೆಲ್ಲ ಬ್ರಹ್ಮತ್ವಸಹಿತವಾಗಿಯೇ ಆತ್ಮತ್ವೋಪಾಸನೆಯನ್ನು ಮಾಡಬೇಕು.

### 5. ಆದಿತ್ಯಾಧಿಕರಣ

ಇದು ಏಕಸೂತ್ರಾಧಿಕರಣ.

**ಓಂ ಆದಿತ್ಯಾದಿಮತಯಶ್ಚಾಂಗ ಉಪಪತ್ತೇಃ ಓಂ**

ಭಗವಂತನ ಅವಯವಗಳು ಸೂರ್ಯಾದಿಜನಕಗಳೆಂದು ಉಪಾಸನೆ ದೇವತೆಗಳಿಗೆ ಮಾತ್ರ.

ತಮ್ಮನ್ನು ಹುಟ್ಟಿಸಿರುವ ಭಗವಂತನ ಅಂಗಗಳನ್ನು ದೇವತೆಗಳು ಆಶ್ರಯಿಸಿರುತ್ತಾರೆ ಎಂಬ ಉಪಾಸನೆಯೇ ವಿಷಯ. ಈ ರೀತಿ ಉಪಾಸನೆಯು ಸರ್ವಥಾ ಕಾರ್ಯವೋ ಅಥವಾ ಅಲ್ಲವೋ ಎಂದು ಸಂಶಯ. ಎರಡು ರೀತಿಯಾಗಿಯೂ ಉಪಾಸನೆ ಕಂಡಿರುವುದೇ ಸಂಶಯಕ್ಕೆ ಕಾರಣ.

ಸೂರ್ಯಾದಿದೇವತೆಗಳು ಬೇರೆ ಬೇರೆ ಕಡೆ ಸಂಚರಿಸುತ್ತಿರುತ್ತಾರೆ. ಆದ ಕಾರಣ ಸದಾ ಭಗವಂತನ ಚಕ್ಷುರಾದಿ ಅಂಗಗಳನ್ನು ಆಶ್ರಯಿಸಿದ್ದಾರೆಂದು ಎಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಸದಾ ಅಂಗಾಶ್ರಿತತ್ವದ ಉಪಾಸನೆಯು ಮಿಥ್ಯೋಪಾಸನೆಯಾಗುತ್ತದೆ. ಉಪಾಸನೆಗೆ ಇತರ ಗುಣಗಳಿರುವಾಗ ಅಂಗಾಶ್ರಿತತ್ವದ ವಿಶೇಷ ಉಪಾಸನೆಗೆ ಅಸಾಧಾರಣ ಕಾರಣವೂ ಇಲ್ಲ. ಹೀಗೆ ದೇವತೆಗಳಿಗೆ ಪರಮಾತ್ಮನ ಅಂಗಾಶ್ರಿತತ್ವವಿದ್ದರೂ ಆದರ ಉಪಾಸನೆಯ ಅವಶ್ಯಕತೆ ಇಲ್ಲ ಆದ್ದರಿಂದ ಸರ್ವಥಾ ಉಪಾಸ್ಯವಲ್ಲ.

ಚಕ್ಷೋಃ ಸೂರ್ಯೋ ಅಜಾಯತ ಮುಂತಾದ ಶ್ರುತಿಗಳಿಂದ ಹೇಳಲ್ಪಟ್ಟ ಅಂಗಾಶ್ರಿತತ್ವದ ಉಪಾಸನೆಯನ್ನು ಆದಿತ್ಯಾದಿದೇವತೆಗಳು ಸರ್ವದಾ ಅವಶ್ಯವಾಗಿ ಮಾಡಬೇಕು. ಯಾವ ಸ್ಥಾನದಿಂದ ಜನ್ಮ ಪಡೆಯುತ್ತಾರೋ ಅದೇ ಸ್ಥಾನದಲ್ಲಿಯೇ ಅವರಿಗೆ ಮುಕ್ತಿಕಾಲದಲ್ಲಿ ಲಯವು ಅಪೇಕ್ಷಿತವಾದ್ದರಿಂದ ಆ ಸ್ಥಾನದ ಉಪಾಸನೆಯು ಅವಶ್ಯಕವಾಗಿದೆ. ಸೂರ್ಯಾದಿದೇವತೆಗಳು ನಿತ್ಯದಲ್ಲಿ ಬೇರೆ ಕಡೆ ಸಂಚರಿಸುತ್ತಿದ್ದರೂ ಒಂದು ರೂಪದಿಂದ ಭಗವಂತನ ಅಂಗದಲ್ಲಿಯೇ ಇರುತ್ತಾರೆ ಆದ್ದರಿಂದ ಇದು ಮಿಥ್ಯೋಪಾಸನೆಯಾಗುವದಿಲ್ಲ. ಕಾರಣ ದೇವತೆಗಳಿಗೆ ಅಂಗಾಶ್ರಿತತ್ವದ ಚಿಂತನೆ ಅವಶ್ಯ ಕರ್ತವ್ಯವಾಗಿದೆ.

## 6. ಆಸನಾಧಿಕರಣ

ಈ ಅಧಿಕರಣದಲ್ಲಿ ಒಟ್ಟು ಐದು ಸೂತ್ರಗಳಿವೆ.

**ಓಂ ಆಸೀನಸ್ಸಂಭವಾತ್ ಓಂ**

**ಓಂ ಧ್ಯಾನಾಚ್ಚ ಓಂ**

**ಓಂ ಅಚಲತ್ವಂ ಚಾಪೇಕ್ಷ್ಯ ಓಂ**

**ಓಂ ಸ್ಮರಂತಿ ಚ ಓಂ**

**ಓಂ ಯತ್ರೈಕಾಗ್ರತಾ ತತ್ರಾವಿಶೇಷಾತ್ ಓಂ**

ಆಸನದಲ್ಲಿ ಕುಳಿತೇ ಉಪಾಸನೆ ಮಾಡಬೇಕು.

ಕುಳಿತಾಗಲೇ ಧ್ಯಾನವು ಸಾಧ್ಯವಾದ್ದರಿಂದ ಆಸನದಲ್ಲಿ ಕುಳಿತೇ ಉಪಾಸನೆಯನ್ನು ಮಾಡಬೇಕು.

ಆಸನವೇ ಈ ಅಧಿಕರಣದ ವಿಷಯ. ಆಸನವು ಆವಶ್ಯಕವೋ ಅಥವಾ ಅಲ್ಲವೋ ಎಂದು ಸಂಶಯ. ಎರಡು ವಿಧವಾದ ಸಾಧನಗಳು ಕಂಡಿರುವುದೇ ಪ್ರಕೃತ ಸಂಶಯಕ್ಕೆ ಕಾರಣ.

ಆಸನದ ಆವಶ್ಯಕತೆ ಇಲ್ಲ ಏಕೆಂದರೆ ಧ್ಯಾನಕ್ಕೆ ಅದರಿಂದ ಏನೂ ಪ್ರಯೋಜನವಿಲ್ಲ.

ಭಗವಂತನ ಅಪರೋಕ್ಷಜ್ಞಾನಕ್ಕಾಗಿ ಉಪಾಸನಾದಿಗಳನ್ನು ಮಾಡಬೇಕು. ಇದು ಮನಸ್ಸಿನ ಏಕಾಗ್ರತೆಯಿಂದ ಸಾಧ್ಯವಾಗಿದೆ. ಆದ್ದರಿಂದ ಇದರಲ್ಲಿ ಆಸನಾದಿಗಳ ಕೃತ್ಯವೇ ಇಲ್ಲ. ಆಸನವಿಲ್ಲದೇ ಮನಸ್ಸನ್ನು ಭಗವಂತನಲ್ಲಿ ಸ್ಥಾಪಿಸಲಾಗುವದಿಲ್ಲವೆಂದರೆ ಸ್ಮರ್ತವ್ಯಃ ಸತತಂ ವಿಷ್ಣುಃ ವಿಷ್ಣುವನ್ನು ಸದಾ ಸ್ಮರಿಸಬೇಕು ಮುಂತಾದ ವಿಧಿಗಳು ಅನುಪಪನ್ನವಾಗುತ್ತವೆ. ಹೀಗೆ ಆಸನಾದಿಗಳು ಅನಾವಶ್ಯಕವಾದ್ದರಿಂದ ಅವುಗಳನ್ನು ಉಪದೇಶಿಸಿದ್ದು ವ್ಯರ್ಥ.

ಸಾಧಕನು ಆಸೀನನಾಗಿಯೇ ವಿಶೇಷವಾಗಿ ಉಪಾಸನೆಯನ್ನು ಮಾಡಬೇಕು. ಉಪಾಸನೆಯೇ ಜ್ಞಾನ ಸಾಧನವಾದರೂ ಆಸೀನನಿಗೆ ಮಾತ್ರ ಆ ಉಪಾಸನೆಯು ಸಾಧ್ಯ. ಇಲ್ಲದಿದ್ದರೆ ಸಾಧ್ಯವಿಲ್ಲ. ಆಸೀನನಿಗೆ ಚಿತ್ತವಿಕ್ಷೇಪಾದಿಗಳು ಅಲ್ಪವಾಗಿವೆ. ಆದ್ದರಿಂದ ಧ್ಯಾನಕ್ಕೋಸ್ಕರ ಆಸನನಿಯಮವನ್ನು ಹೇಳಿದ್ದು ಸಮಂಜಸವೇ ಆಗಿದೆ.

## 7. ಪ್ರಾಯಣಾಧಿಕರಣ

ಮೋಕ್ಷಸಿಗುವವರೆಗೂ ಉಪಾಸನೆ ಮಾಡತಕ್ಕದ್ದು ಮೋಕ್ಷದಲ್ಲೂ ಉಪಾಸನೆ ಮಾಡಬೇಕು.

ಪ್ರಕೃತವಾದ ಧ್ಯಾನವೇ ಈ ಅಧಿಕರಣದ ವಿಷಯ. ಧ್ಯಾನವನ್ನು ಜ್ಞಾನಪರ್ಯಂತವಾಗಿ ಆಚರಿಸಬೇಕೋ ಅಥವಾ ಮುಕ್ತಿಪರ್ಯಂತವಾಗಿಯೋ ಎಂದು ಸಂಶಯ. ಜ್ಞಾನಸಾಧನವಾಗಿದೆ ಧ್ಯಾನ ಆದ್ದರಿಂದ ಜ್ಞಾನಪರ್ಯಂತವಾಗಿ ಅನುಷ್ಠಾನಮಾಡಬೇಕು ಎನ್ನಲು ಸಾಧ್ಯವಿಲ್ಲ. ವಿಶ್ವೇದೇವಾ ಉಪಾಸತೇ ಎಂಬ ವಾಕ್ಯದಿಂದ ಜ್ಞಾನಿಗಳೂ ಧ್ಯಾನಮಾಡುತ್ತಿರುವುದು ಕಂಡಿದೆ ಆದ್ದರಿಂದ ಸಂಶಯವು ಉದ್ಭವಿಸುತ್ತದೆ.

ಜ್ಞಾನಪರ್ಯಂತವಾಗಿ ಧ್ಯಾನವನ್ನು ಮಾಡಬೇಕು. ಶ್ರವಣಾದಿಗಳ ವಿಧಾನವು ಜ್ಞಾನಕ್ಕೋಸ್ಕರ. ಹೀಗಿರುವಾಗ ಮುಕ್ತಿಪರ್ಯಂತ ಅದರ ಅನುಷ್ಠಾನಕ್ಕೆ ಕಾರಣವಿಲ್ಲ. ಮೋಕ್ಷದಲ್ಲಿ ಆನಂದಾಭಿವೃದ್ಧಿಯು ಶ್ರವಣಾದಿಗಳಿಂದಲೂ ಸಂಭವಿಸುವಾಗ ಧ್ಯಾನದ ಆಗತ್ಯವಿಲ್ಲ. ಹೀಗೆ ಮೋಕ್ಷಪರ್ಯಂತವಾಗಿ ಧ್ಯಾನವನ್ನು ಮಾಡಬೇಕಿಲ್ಲವಾದ್ದರಿಂದ ಜ್ಞಾನಿಗಳಾದ ಶುಕಾದಿಗಳಿಗೆ ಅದರಲ್ಲಿ ಆಗ್ರಹವು ವ್ಯರ್ಥ.

ಸಾಧಕನು ಮೋಕ್ಷಕ್ಕೆ ಹೋಗುವವರೆಗೂ ಧ್ಯಾನವನ್ನು ಆಚರಿಸಬೇಕು. ಪ್ರಾಯಣಾಂತಮೋಂಕಾರ-ಮಭಿಧ್ಯಾಯೀತ ಮೊದಲಾದ ಶ್ರುತಿಗಳಿರುವದರಿಂದ ಮುಕ್ತಿಪರ್ಯಂತವಾಗಿ ಧ್ಯಾನವನ್ನು ಆಚರಿಸಬೇಕು. ಮತ್ತು ಮುಕ್ತಾ ಅಪಿ ಹ್ಯೇನಮುಪಾಸತೇ ಮುಕ್ತರೇ ಧ್ಯಾನವನ್ನು ಆಚರಿಸಬೇಕೆಂದು ಹೇಳುವುದೇನಿದೆ ಹೀಗೆ ಧ್ಯಾನವು ಮುಕ್ತಿಪರ್ಯಂತವಾಗಿ ಕರ್ತವ್ಯವಾದ್ದರಿಂದ ಶುಕಾದಿಗಳ ಧ್ಯಾನಾಚರಣೆಯು ಸಮಂಜಸವೇ ಆಗಿದೆ.

### 8. ತದಧಿಗಮಾಧಿಕರಣ

ಪರಮಾತ್ಮನ ಸಾಕ್ಷಾತ್ಕಾರದಿಂದ ಅನಿಷ್ಟಪುಣ್ಯಪಾಪಗಳ ಲೇಪವಿಲ್ಲ ಭಗವದ್ವೇಷಿಗೆ ತಮಸ್ಸಿನಲ್ಲಿ ಪುಣ್ಯದ ಸಂಬಂಧವಿಲ್ಲ.

ಜ್ಞಾನಿ ಮಾಡಿದ ಪುಣ್ಯಕರ್ಮ ಮೋಕ್ಷದಲ್ಲಿ ಆನಂದಾತಿಶಯದಾಯಕ.

ಈ ಅಧಿಕರಣದಲ್ಲಿ ಒಟ್ಟು ಏಳು ಸೂತ್ರಗಳು.

1. **ಓಂ ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್ ಓಂ**
2. **ಓಂ ಇತರಸ್ಯಾಪ್ಯೇವಮೇವ ಸಂಶ್ಲೇಷ ಪಾತೇ ತು ಓಂ**
3. **ಓಂ ಅನಾರಬ್ಧಕಾರ್ಯೇ ಏವ ತು ಪೂರ್ವೇ ತದವಧೇಃ ಓಂ**
4. **ಓಂ ಅಗ್ನಿಹೋತ್ರಾದಿ ತು ತತ್ಕಾರ್ಯಾಯೈವ ತದ್ದರ್ಶನಾತ್ ಓಂ**
5. **ಓಂ ಅತೋ ಅನ್ಯದಪೀತ್ಯೇಕೇಷಾಮುಭಯೋಃ ಓಂ**
6. **ಓಂ ಯದೇವ ವಿದ್ಯಯೇತಿ ಹಿ ಓಂ**
7. **ಓಂ ಭೋಗೇನ ತ್ವಿತರೇ ಕ್ಷಪಯಿತ್ವಾ ಅಥ ಸಂಪತ್ಸ್ಯತೇ ಓಂ**

ಜ್ಞಾನವೇ ಈ ಅಧಿಕರಣದ ವಿಷಯ. ಮೋಕ್ಷಕ್ಕೆ ಸಾಧನವೇ ? ಅಲ್ಲವೇ ಎಂದು ಸಂದೇಹ. ನಿಷ್ಕಾಮಕರ್ಮವು ಸಾಧನವಾಗಿದ್ದರೂ ಸಕಾಮಕರ್ಮವು ಸಾಧನವಾಗಿಲ್ಲ. ಇದೆ ಪ್ರಕೃತದಲ್ಲಿ ಸಂಶಯಕ್ಕೆ ಕಾರಣ.

ಜ್ಞಾನವು ಮೋಕ್ಷಸಾಧನವಲ್ಲ. ಜ್ಞಾನ ಬಂದ ನಂತರವೂ ಹಿಂದಿನ ಕರ್ಮವು ಇರುವುದರಿಂದ ಜ್ಞಾನ ಬಂದ ಜನ್ಮದಲ್ಲಿಯೇ ಎಲ್ಲ ಕರ್ಮಗಳ ಭೋಗವು ಆಗುವುದಿಲ್ಲ. ಕಾಯವ್ಯೂಹದಿಂದ ಒಂದೇ ಕಾಲದಲ್ಲಿ ಎಲ್ಲ ಕರ್ಮಗಳ ಭೋಗವೂ ಆಗುವದಿಲ್ಲ. ಕರ್ಮಗಳು ವಿಭಿನ್ನದೇಶಕಾಲಗಳಿಂದ ವಿಭಕ್ತವಾಗಿವೆ. ಆದ ಕಾರಣ ಕ್ರಮವಾಗಿ ಅವುಗಳ ಭೋಗ. ಎಲ್ಲ ಕರ್ಮಗಳ ಭೋಗದಿಂದ ಕ್ಷಯ ನಂತರ ಮೋಕ್ಷ. ಆದರೆ ಬಹುಕಾಲಾನಂತರ ಜೀರ್ಣವಾದ ಬೀಜದಂತೆ ಜ್ಞಾನದ ಶಕ್ತಿಯು ಕ್ಷೀಣವಾಗಿ ಜ್ಞಾನವು ಫಲಜನಕವೇ ಆಗುವದಿಲ್ಲ. ಒಂದು ಕರ್ಮದ ಭೋಗದ ಸಮಯದಲ್ಲಿ ಅನಂತಕರ್ಮಗಳ ಅನುಷ್ಠಾನದಿಂದ ಕರ್ಮದ ಪರಿಸಮಾಪ್ತಿಯೇ ಆಗುವದಿಲ್ಲ. ಜ್ಞಾನದಿಂದಲೇ ಪ್ರಾಚೀನಕರ್ಮಗಳ ನಾಶವು ಜ್ಞಾನೋತ್ತರ ಕರ್ಮಗಳ ಅಲೇಪ ಎನ್ನಲೂ ಸಾಧ್ಯವಿಲ್ಲ. ಏಕೆಂದರೆ ನಾಭುಕ್ತಂ ಕ್ಷೀಯತೇ ಕರ್ಮ ಎಂಬ ಸ್ಮೃತಿಯ ವಿರೋಧವಿದೆ. ಆದ್ದರಿಂದ ಜ್ಞಾನದಿಂದ ಮೋಕ್ಷಸಿದ್ಧಿಯಾಗುವುದಿಲ್ಲ.

ಜ್ಞಾನವೇ ಮೋಕ್ಷಸಾಧನ. ಬ್ರಹ್ಮಜ್ಞಾನದಿಂದ ಪೂರ್ವಪಾಪಗಳೆಲ್ಲವೂ ನಾಶವಾಗಿ ಜ್ಞಾನೋತ್ತರ ಪಾಪದ ಅಲೇಪವು ಸಂಭವಿಸುವದರಿಂದ ಜ್ಞಾನವು ಮೋಕ್ಷಸಾಧನವಾಗಲು ಯಾವುದೇ ಹಾನಿ ಇಲ್ಲ. ನಾಭುಕ್ತಂ ಎಂಬ ಸ್ಮೃತಿಯು ಅಜ್ಞಾನಿಗಳ ಬಗ್ಗೆ ಹೇಳುತ್ತಿರುವದರಿಂದ ಅದರ ವಿರೋಧವಿಲ್ಲ.

## 2. ಅಥ ಚತುರ್ಥಾಧ್ಯಾಯಸ್ಯ ದ್ವಿತೀಯಃ (ಉತ್ಕ್ರಾಂತಿಪಾದಃ)

ಇಲ್ಲಿ ಒಟ್ಟು ಹತ್ತು ಅಧಿಕರಣಗಳು

1. ವಾಙ್ಮನಸಾಧಿಕರಣ
2. ಮನೋಧಿಕರಣ
3. ಅಧ್ಯಕ್ಷಾಧಿಕರಣ
4. ಭೂತಾಧಿಕರಣ
5. ಅನೇಕಲಯಾಧಿಕರಣ
6. ಸಮನಾಧಿಕರಣ
7. ಪರಾಧಿಕರಣ
8. ಅವಿಭಾಗಾಧಿಕರಣ
9. ಹೃದಯಾಗ್ರಜ್ವನಾಧಿಕರಣ
10. ಪ್ರತಿಸ್ಮರಣಾಧಿಕರಣ

### 1.ವಾಙ್ಮನಸಾಧಿಕರಣಮ್

ಎಲ್ಲ ದೇವತೆಗಳು ನಿಯಮ್ಯನಿಯಾಮಕಾನುಸಾರ ನಿಯಾಮಕರಲ್ಲಿ ಲಯ ಹೊಂದುವರು

**ಓಂ ವಾಙ್ಮನಸಿ ದರ್ಶನಾಚ್ಛಬ್ದಾಚ್ಚ ಓಂ**

ವಾಗಭಿಮಾನಿದೇವತೆಯು ಈ ಅಧಿಕರಣದ ವಿಷಯ. ವಾಗಭಿಮಾನಿದೇವತೆಯು ಮನೋಭಿ-ಮಾನಿದೇವತೆಯಲ್ಲಿ ಲಯವನ್ನು ಹೊಂದುತ್ತಾಳೋ ಇಲ್ಲವೋ ಎಂದು ಸಂಶಯ. ವಾಕ್‌ದೇವತೆಗೆ ಮನಸ್ಸಿನಿಂದ ಉತ್ಪತ್ತಿಯನ್ನು ಹೇಳಿದ್ದರೂ ವಿಶೇಷಪ್ರಮಾಣ ಕಾಣಸದಿರುವದರಿಂದ ಸಂಶಯವು ಉಂಟಾಗುತ್ತದೆ.

ವಾಗ್‌ದೇವತೆಯು ಮನೋಭಿಮಾನಿಯಲ್ಲಿ ಲಯವನ್ನು ಹೊಂದುವದಿಲ್ಲ. ವಾಕ್‌ಪೂರ್ವರೂಪಂ ಮನ ಉತ್ತರರೂಪಮ್ ಎಂದು ವಿರುದ್ಧವಾದ ವಾಕ್ಯಗಳಿವೆ. ಆದ್ದರಿಂದ ಇಬ್ಬರೂ ದೇವತೆಗಳಲ್ಲೂ ನಿಯಮ್ಯನಿಯಾಮಕಭಾವವನ್ನು ನಿಶ್ಚಯಿಸಲು ಸಾಧ್ಯವಿಲ್ಲ ಹೀಗೆ ವಾಗ್ದೇವತೆಗೆ ಮನೋದೇವತೆಯಲ್ಲಿ

ಲಯವನ್ನು ಹೇಳಲು ಸಾಧ್ಯವಿಲ್ಲವಾದ ಕಾರಣ ಅನಿಯಮಃ ಸರ್ವೇಷಾಂ ಎಂಬಲ್ಲಿ ಹೇಳಿದ ಮುಕ್ತ್ಯವಸ್ಥೆಯು ಅನುಪಪನ್ನ.

ಮನಸ್ಸಿನ ಪ್ರವೃತ್ತಿಯ ನಂತರವೇ ವಾಕ್‌ನ ಪ್ರವೃತ್ತಿ ಎಂದು ಎಲ್ಲರಿಗೂ ಅನುಭವಸಿದ್ಧವಾಗಿದೆ. ಮನಸಾ ವಾಗ್ರೇ ಸಂಕಲ್ಪಯತ್ಯಥ ವಾಚಾ ವ್ಯವಹರತಿ ಎಂದು ಶ್ರುತಿಯಿಂದಲೂ ಸಹ ವಾಕ್ ಪ್ರವೃತ್ತಿಯು ಮನಃಪ್ರಭೃತಿಪೂರ್ವಕವೆಂದು ಸಿದ್ಧವಾಗುತ್ತದೆ. ಹೀಗೆ ಮನೋದೇವತೆಗೆ ಉತ್ತಮತ್ವವು ಇರುವದರಿಂದ ವಾಕ್‌ದೇವತೆಗೆ ಮನೋದೇವತೆಯಲ್ಲಿ ಲಯವು ಯುಕ್ತವಾಗಿದೆ. ವಾಕ್ ಪೂರ್ವರೂಪಂ ಮನ ಉತ್ತರರೂಪಮ್ ಮನಃ ಪೂರ್ವರೂಪಂ ವಾಗುತ್ತರರೂಪಮ್ ಎಂದು ಶ್ರುತಿಯಲ್ಲಿ ಪೂರ್ವೋತ್ತರ-ವರ್ಣದೇವತಾ ವಿಷಯದಲ್ಲಿ ಹಾಗೂ ಗುಣಪ್ರಧಾನಭಾವದ ವಿಷಯದಲ್ಲಿ ಋಷಿಗಳ ವಿವಾದವನ್ನು ತಿಳಿಸಲಾಗಿದೆ. ಆದ್ದರಿಂದ ಅನಿಯಮಃ ಸರ್ವೇಷಾಮ್ ಎಂಬ ಸೂತ್ರದಲ್ಲಿ ಹೇಳಿದ ಮುಕ್ತ್ಯವಸ್ಥೆಗೆ ಹಾನಿ ಇಲ್ಲ.

## 2. ಮನೋಧಿಕರಣ

ಇದು ಏಕಸೂತ್ರಾಧಿಕರಣ. ಇಲ್ಲಿ ಮನೋಭಿಮಾನಿಯಾದ ರುದ್ರನು ಪ್ರಾಣನಲ್ಲಿ ಲಯ ಹೊಂದುವನು ಎಂದು ಈ ಅಧಿಕರಣದಲ್ಲಿ ಹೇಳಲಾಗಿದೆ.

ಪ್ರಕೃತವಾದ ಮನಸ್ಸು ಈ ಅಧಿಕರಣದ ವಿಷಯ. ಪ್ರಾಣನಲ್ಲಿ ಮನಸ್ಸು ಲಯ ಹೊಂದುತ್ತದೆಯೋ ಇಲ್ಲವೋ ಎಂದು ಸಂಶಯ. ಮನಸ್ಸು ಪ್ರಾಣನಿಂದ ಜನ್ಯವಾಗಿರುವದು ಪ್ರಾಣನಲ್ಲಿ ಲಯವನ್ನು ಹೇಳುವ ವಿಶೇಷ ಪ್ರಮಾಣವಿಲ್ಲದಿರುವದು ಸಂಶಯಕ್ಕೆ ಕಾರಣ.

ಮನಸ್ಸು ಪ್ರಾಣನಲ್ಲಿ ಲಯವನ್ನು ಹೊಂದುವುದಿಲ್ಲ. ಸ್ವಲ್ಪ ಬಲವುಳ್ಳವರು ಅಧಿಕಬಲಇದ್ದವರಲ್ಲಿ ಲಯವನ್ನು ಹೊಂದುತ್ತಾರೆ. ಆದರೆ ಮನೋಭಿಮಾನಿದೇವತೆಗಳು ಬ್ರಹ್ಮನಿಗಿಂತಲೂ ಸ್ವಲ್ಪಬಲವುಳ್ಳರಲ್ಲ ಎಲ್ಲ ಪ್ರವೃತ್ತಿಗಳಿಗೂ ಬ್ರಹ್ಮದೇವರು ಕಾರಣರಾಗಿರುವಂತೆ ಮನೋಭಿಮಾನಿಗಣದ ಪ್ರವೃತ್ತಿಗೂ ರುದ್ರಶೇಷಾದಿಗಳು ಪ್ರವೃತ್ತಿಕಾರಣರೆಂದು ಅನ್ವಯವ್ಯತಿರೇಕಗಳಿಂದ ಸಿದ್ಧವಾಗಿದೆ. ಪ್ರಾಣನಿಂದ ಮನಸ್ಸಿನ ಉತ್ಪತ್ತಿಯಾದ್ದರಿಂದ ಪ್ರಾಣನಲ್ಲೇ ಲಯವೆಂದು ಆಶಂಕಿಸಬಾರದು. ಏಕೆಂದರೆ ತತ್ ಪ್ರಾಕ್ ಶ್ರುತೇಶ್ಚ ಎಂಬ ಸೂತ್ರದಲ್ಲಿ ಪರಮಾತ್ಮನಿಂದಲೇ ಮನಸ್ಸಿನ ಉತ್ಪತ್ತಿ ಎಂದು ಸಮರ್ಥಿಸಲಾಗಿದೆ. ಆದ್ದರಿಂದ ಮನೋಭಿಮಾನಿಗಳಿಗೆ ಮೋಕ್ಷವೇ ಇಲ್ಲ.

ವಾಙ್ಮನಸಿ ಸಂಪದ್ಯತೇ ಮನಃ ಪ್ರಾಣೇ ಎಂದೂ ಶ್ರುತಿ ಇರುವದರಿಂದ ಮನಸ್ಸು ಪ್ರಾಣನಲ್ಲಿಯೇ ಲಯವನ್ನು ಹೊಂದುತ್ತದೆ. ಪ್ರಾಣನಿಂದ ಜನ್ಮವನ್ನು ಹೊಂದದ ಮನಸ್ಸಿಗೆ ಪ್ರಾಣನಲ್ಲಿ ಲಯವಾದರೂ ಹೇಗೆ ವಾಯೋರ್ವಾವ ರುದ್ರ ಉದೇತಿ ವಾಯೌ ವಿಲೀಯತೇ ಎಂದು ಶ್ರುತಿಯೇ ವಾಯುವಿನಿಂದ ಮನೋಭಿಮಾನಿ ರುದ್ರನ ಜನ್ಮವನ್ನು ಹೇಳುತ್ತಿದೆ. ಪ್ರಾಣನ ಮೂಲಕ ಭಗವಂತನಿಂದ ಜನ್ಯವಾದ್ದರಿಂದ ತತ್ ಪ್ರಾಕ್ ಶ್ರುತೇಶ್ಚ ಸೂತ್ರದ ವಿರೋಧವೂ ಇಲ್ಲ. ಪ್ರಾಣ ಹಾಗೂ ಮನೋಭಿಮಾನಿಗಳ ಪ್ರವೃತ್ತಿಯು ಸಮಾನವಲ್ಲ. ಮನ ಉದಕ್ರಾಮತ್ ಮೀಲಿತ ಇವಾಶ್ನನ್ ಪಿಬನ್ನಾಸ್ಸೈವ ಎಂಬ ಶ್ರುತಿಯಿಂದ ಅಸಾಧಾರಣವಾಗಿ ಪ್ರವೃತ್ತಿಕಾರಣ ಪ್ರಾಣನೇ ಆಗಿದ್ದಾನೆ ಎಂದು ಸಿದ್ಧವಾಗುವದು. ಆದ್ದರಿಂದ ಪ್ರಾಣನಲ್ಲಿ ಮನಸ್ಸಿಗೆ ಲಯವು. ಅಂದರೆ ಬ್ರಹ್ಮನಲ್ಲಿ ಶೇಷ-ಗರುಡರಿಗೆ ಲಯವಿದ್ದೇ ಇದೆ.

## 3. ಅಕ್ಷರಾಧಿಕರಣ

ಇದು ಏಕಸೂತ್ರಾಧಿಕರಣ. ಇಲ್ಲಿ ಮುಖ್ಯಪ್ರಾಣದೇವರು ಪರಮಾತ್ಮನಲ್ಲಿ ಲೀನರಾಗುವರು ಎಂದು ಹೇಳಿದ್ದಾರೆ. ಚತುರ್ಮುಖನೇ ಈ ಅಧಿಕರಣದ ವಿಷಯ. ಪರಮಾತ್ಮನಲ್ಲಿ ಲಯವನ್ನು ಹೊಂದುತ್ತಾನೋ ಇಲ್ಲವೋ ಎಂದು ಸಂಶಯ. ಶ್ರೇಷ್ಠಶ್ಚ ಸೂತ್ರದಲ್ಲಿ ಚತುರ್ಮುಖನನ್ನು ಪರಮಾತ್ಮನಿಂದ ಹುಟ್ಟಿದವನು ಎಂದು ಹೇಳಲಾಗಿದೆ. ಆದರೆ ಪರಮಾತ್ಮನಲ್ಲಿ ಲಯವೆನ್ನಲು ವಿಶೇಷ ಪ್ರಮಾಣವಿಲ್ಲದಿರುವುದು ಸಂಶಯಕ್ಕೆ ಕಾರಣ.

ಪ್ರಾಣನು ಪರಮಾತ್ಮನಲ್ಲಿ ಲಯವನ್ನು ಹೊಂದುವದಿಲ್ಲ. ನ ಪ್ರಾಣಃ ಕಿಂಚಿದಾಶ್ರಿತಃ ಎಂಬ ಶ್ರುತಿಯು ಹೇಳುವಂತೆ ಪ್ರಾಣನು ಪರಮಾತ್ಮನ ಅಧೀನನೇ ಅಲ್ಲ. ಪ್ರಾಣನು ಅನ್ಯಾಧೀನನಲ್ಲ ಎಂಬ ವಿಷಯದಲ್ಲಿ ಬಹಳ ಶ್ರುತಿಗಳಿವೆ. ಶ್ರುತಿಬಾಹುಲ್ಯವು ಪ್ರಾಬಲ್ಯವನ್ನು ತಿಳಿಸುತ್ತದೆ. ಮಹಾಂತಮಸ್ಯ ಮಹಿಮಾನಮಾಹುರನದ್ಯಮಾನೋ ಯದನನ್ನಮತ್ತಿ ಎಂಬ ಶ್ರುತಿಯಲ್ಲಿ ಪ್ರಾಣನಿಗೆ ಲಯವಿಲ್ಲವೆಂದು ಹೇಳಲಾಗಿದೆ. ಹೀಗೆ ಪರಮಾತ್ಮನಲ್ಲಿ ಪ್ರಾಣನಿಗೆ ಲಯವಿಲ್ಲವಾದ್ದರಿಂದ ಯಾರಿಗೂ ಮೋಕ್ಷವಿಲ್ಲ.

ಪ್ರಾಣನು ಅಂದರೆ ಚತುರ್ಮುಖನು ಪರಮಾತ್ಮನಲ್ಲಿ ಲಯವನ್ನು ಹೊಂದುವನು. ಪ್ರಾಣನು ಪರಮಾತ್ಮಾಧೀನ ಎಂಬ ವಿಷಯದಲ್ಲಿ ಬಹಳವಾದ ಶ್ರುತಿಗಳಿವೆ. ಮತ್ತು ಶ್ರುತಿಗಳು ನಿರವಕಾಶವೂ ಆಗಿವೆ. ಅನಧೀನತ್ವವನ್ನು ಹೇಳುವ ಶ್ರುತಿಗಳು ಈಶ್ವರನಿಗಿಂತಲೂ ಇತರರ ಅಧೀನನಲ್ಲ ಎಂಬ ಅಭಿಪ್ರಾಯವುಳ್ಳದ್ದಾಗಿ ಸಾವಕಾಶಗಳಾಗಿವೆ. ಆದ್ದರಿಂದ ಪ್ರಾಣನಿಗೂ ಲಯವಿರುವುದರಿಂದ ಎಲ್ಲ ಅಪರೋಕ್ಷಜ್ಞಾನಿಗಳಿಗೂ ಮೋಕ್ಷವು ಯುಕ್ತವೇ ಆಗಿದೆ.

## 4. ಭೂತಾಧಿಕರಣ

ಇದು ಏಕಸೂತ್ರಾಧಿಕರಣ. ಇಲ್ಲಿ ಭೂತಾಭಿಮಾನಿಗಳಲ್ಲಿ ಅವರಿಗಿಂತ ಕೆಳಗಿನ ದೇವತೆಗಳು ಲಯವನ್ನು ಹೊಂದುವರು ಎಂದು ಹೇಳಲಾಗಿದೆ.

ಅಗ್ನೌ ಸರ್ವೇ ದೇವಾ ವಿಲೀಯಂತೇ ಎಂಬ ಶ್ರುತಿಯು ಹೇಳಿದಂತೆ ದೇವತೆಗಳೇ ವಿಷಯ. ಒಬ್ಬನೇ ಅಗ್ನಿಯಲ್ಲಿ ಎಲ್ಲರೂ ಲಯವನ್ನು ಹೊಂದುವರೋ ಅಥವಾ ಇತರ ಭೂತಗಳಲ್ಲಿಯೂ ಲಯವನ್ನು ಹೊಂದುವರೋ ಎಂದು ಸಂಶಯ. ಅಗ್ನೌ ಸರ್ವೇ ದೇವಾ ವಿಲೀಯಂತೇ ಎಂಬ ಶ್ರುತಿಯು ಮತ್ತು ಇತರ ದೇವತೆಗಳ ಅಧೀನರಾಗಿರುವದೂ ಸಂಶಯಕ್ಕೆ ಕಾರಣ.

ಅಗ್ನೌ ಸರ್ವೇ ದೇವಾ ವಿಲೀಯಂತೇ ಎಂಬ ಶ್ರುತಿಯಿರುವದರಿಂದ ಎಲ್ಲ ದೇವತೆಗಳಿಗೂ ಅಗ್ನಿಯಲ್ಲೇ ಲಯ. ಈ ದೇವತೆಗಳು ಅನ್ಯಾಧೀನರಾದ್ದರಿಂದ ಅಗ್ನಿಯಲ್ಲಿ ಲಯಹೊಂದದೇ ತಮ್ಮ ನಿಯಾಮಕರಲ್ಲೇ ಲಯವನ್ನು ಹೊಂದುವರು ಎಂದು ಹೇಳಬಾರದು. ಸಾಕ್ಷಾನ್ನಿಯಾಮಕರಿಂದ ಆರಂಭಿಸಿ ಅಧ್ಯಕ್ಷಪರ್ಯಂತವಾಗಿ ನಿಯಾಮಕರು ಅನೇಕರಿರುವುದರಿಂದ ಯಾರಲ್ಲಿ ಲಯವೆಂದು ನಿರ್ಣಯಿಸಲು ಸಾಧ್ಯವಿಲ್ಲ ಆದ್ದರಿಂದ ಎಲ್ಲ ದೇವತೆಗಳಿಗೂ ಅಗ್ನಿಯಲ್ಲೇ ಲಯವು ಸಮಂಜಸ. ಅಧಮರಿಗೆ ಉತ್ತಮರಲ್ಲಿ ಲಯವೆನ್ನುವುದು ಯುಕ್ತವಲ್ಲ.

ವಾಙ್ಮನಸಿ ಎಂಬ ಶ್ರುತಿಯಲ್ಲಿ ವಿಶೇಷವಾಗಿ ಹೇಳಲ್ಪಟ್ಟ ದೇವತೆಗಳಿಗಿಂತಲೂ ಇತರ ದೇವತೆಗಳಿಗೆ

ಭೂತಾಭಿಮಾನಿಗಳಲ್ಲಿ ಲಯ ಹೊರತಾಗಿ ಅಗ್ನಿಯಲ್ಲಿಯೇ ಎಲ್ಲರಿಗೂ ಲಯವಿಲ್ಲ. ಭೂತೇಷು ದೇವಾಃ ಎಂಬ ಶ್ರುತಿಯೇ ಈ ವಿಷಯದಲ್ಲಿ ಆಧಾರ. ಭೂತೇಷು ಎಂದು ನಿರವಕಾಶವಾದ ಬಹುವಚನವು ಶ್ರುತವಾಗಿರುವುದರಿಂದ ಅಗ್ನೌ ಸರ್ವೇ ದೇವಾ ವಿಲೀಯಂತೇ ಎಂಬ ಶ್ರುತಿಗೆ ಅರ್ಥಸಂಕೋಚವನ್ನು ಮಾಡಬೇಕು. ನಿಯಾಮಕರು ಅನೇಕರಿದ್ದರೂ ಯಾರಿಂದ ಹುಟ್ಟಿದ್ದಾನೆಯೋ ಅವನಲ್ಲಿ ಲಯವೆಂದು ನಿರ್ಣಯಿಸಲು ಸಾಧ್ಯವಿಲ್ಲ.

## 5. ಅನೇಕ ಲಯಾಧಿಕರಣ

ಇದು ಏಕಸೂತ್ರಾಧಿಕರಣ. ಇಲ್ಲಿ ಅಗ್ನಿಯಲ್ಲಿ ಎಲ್ಲರೂ ಲಯವನ್ನು ಹೊಂದುತ್ತಾರೆ ಎಂದು ಹೇಳಲಾಗಿದೆ.

ದೇವತೆಗಳೇ ಈ ಅಧಿಕರಣದ ವಿಷಯ. ದೇವತೆಗಳು ಎಲ್ಲ ಭೂತಗಳಲ್ಲಿ ಲಯವನ್ನು ಹೊಂದವರೋ ಅಥವಾ ಅಗ್ನಿಯಲ್ಲೇ ಲಯ ಹೊಂದುವರೋ ಎಂದು ಸಂಶಯ. ದೇವತೆಗಳು ಇತರರ ಅಧೀನರಾಗಿರುವುದು ಮತ್ತು ಅಗ್ನೌ ದೇವಾ ವಿಲೀಯಂತೇ ಎಂಬ ಶ್ರುತಿಯು ಸಂಶಯಕ್ಕೆ ಕಾರಣ.

ಎಲ್ಲ ದೇವತೆಗಳಿಗೂ ಅಗ್ನಿಯಲ್ಲಿಯೇ ಲಯ. ಅಗ್ನೌ ಸರ್ವೇ ದೇವಾ ವಿಲೀಯಂತೆ ಎಂಬ ಶ್ರುತಿಯೇ ಇದೆ. ಪಂಚಭೂತಗಳಲ್ಲಿ ಲಯವನ್ನು ಹೊಂದುವರು ಎಂಬ ವಿಷಯದಲ್ಲಿ ವಿಶೇಷಪ್ರಮಾಣವಿಲ್ಲ. ಅಗ್ನೌ ದೇವಾಃ ವಿಲೀಯಂತೇ ಎಂಬ ಶ್ರುತಿಗೆ ಗತ್ಯಂತರಕಲ್ಪನೆಯು ಸಾಧ್ಯವಿಲ್ಲವಾದ್ದರಿಂದ ಅದು ನಿರವಕಾಶವಾಗಿದೆ. ಅಗ್ನಿಯಲ್ಲೇ ದೇವತೆಗಳಿಗೆ ಲಯವಾದರೂ ಅಗ್ನಿಯು ತನ್ನ ಜನಕವಾದ ವಾಯುವಿನಲ್ಲಿ ವಾಯುವು ತನಗೆ ಜನಕವಾದ ಆಕಾಶದಲ್ಲಿ ಲಯವನ್ನು ಹೊಂದುವರು ಎಂದು ಪರಂಪರಾಲಯಾಭಿಪ್ರಾಯದಿಂದ ಭೂತೇಷು ದೇವಾ ವಿಲೀಯಂತೇ ಎಂಬ ಬಹುವಚನಾಂತಶ್ರುತಿಯು ಸಾವಕಾಶವೆಂದು ಹೇಳಬಹುದು. ಆದ್ದರಿಂದ ಅಗ್ನಿಯಲ್ಲೇ ದೇವತೆಗಳಿಗೆ ಲಯವೆನ್ನುವದು ಸಮಂಜಸ. ಪಂಚಭೂತಗಳಲ್ಲಿ ಲಯವೆನ್ನುವದು ಯುಕ್ತವಲ್ಲ.

ಪೃಥಿವ್ಯಾಮೃಭವೋ ..... ಹಾಗೂ ಋಭವಃ ಪೃಥಿವ್ಯಾಂ .....ಎಂಬ ಈ ಎರಡು ಶ್ರುತಿಗಳು ಪಂಚಭೂತಗಳಲ್ಲಿಯೂ ಪ್ರತ್ಯೇಕವಾಗಿ ದೇವತೆಗಳಿಗೆ ಲಯವನ್ನು ಹೇಳುತ್ತಿವೆ. ಆದ್ದರಿಂದ ವಿಶೇಷಪ್ರಮಾಣವಿಲ್ಲವೆಂದು ಹೇಳಬಾರದು. ಯಾವ ದೇವತೆಗಳಿಗೆ ಯಾವ ಭೂತಗಳಲ್ಲಿ ಲಯವೆಂದು ಹೇಳಲ್ಪಟ್ಟಿದೆಯೋ ಆ ಆ ದೇವತೆಗಳು ಆಯಾ ಭೂತಗಳಿಂದಲೇ ಹುಟ್ಟಿದವರಾಗಿದ್ದಾರೆ. ಈ ರೀತಿ ಪ್ರತ್ಯೇಕವಾಗಿ ಲಯವು ದೇವತೆಗಳಿಗೆ ಸಿದ್ಧವಾಗಿರುವುದರಿಂದ ಅಗ್ನೌ ಸರ್ವೇ ದೇವಾ ವಿಲೀಯಂತೇ ಎಂಬ ಶ್ರುತಿಗೆ ನಿರ್ದಿಷ್ಟರಾದ ದೇವತೆಗಳಿಗೆ ಅಗ್ನಿಯಲ್ಲಿ ಲಯವೆಂದು ಅಭಿಪ್ರಾಯ. ಇತರ ಭೂತಗಳಲ್ಲಿ ಪ್ರವೇಶವಿಲ್ಲದಿರುವ ಅಧಮರಿಗೆ ಪ್ರಾಯಃ ಅಗ್ನಿಯಲ್ಲೇ ಲಯ. ಅಗ್ನಿಪುತ್ರರಿಗೆ ಅಗ್ನಿಯಲ್ಲಿ ಲಯ ಎಂದು ಅಭಿಪ್ರಾಯ. ವಿಶಂತಿ ಶಿಷ್ಟಾ ಅಪಿ ಹವ್ಯವಾಹನಮ್ ಎಂದು ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಅಗ್ನಿಪುತ್ರರಿಗಿಂತ ಇತರರಾದ ಕೆಲವು ದೇವತೆಗಳೂ ಅಗ್ನಿಯಲ್ಲಿ ಲಯವನ್ನು ಹೊಂದುವರು. ಹೀಗೆ ಅಗ್ನೌ ಸರ್ವೇ ದೇವಾ ವಿಲೀಯಂತೆ ಎಂಬ ಶ್ರುತಿಯು ಸಾವಕಾಶವೇ ಆಗಿದೆ. ಆದ್ದರಿಂದ ಭೂತೇಷು ದೇವಾ ವಿಲೀಯಂತೆ ಎಂಬ ಶ್ರುತಿಯಿಂದ ಪಂಚಭೂತಗಳಲ್ಲಿಯೂ ದೇವತೆಗಳಿಗೆ ಲಯವೆಂದು ಹೇಳಿದ್ದು ಸಮಂಜಸವೇ ಆಗಿದೆ.

## ಸಮನಾಧಿಕರಣ

ಈ ಅಧಿಕರಣದಲ್ಲಿ ಒಟ್ಟು ಎಂಟು ಸೂತ್ರಗಳು. ಇಲ್ಲಿ ಲಕ್ಷ್ಮೀದೇವಿಗೆ ಲಯವಿಲ್ಲ ಎಂದು ಹೇಳಿದ್ದಾರೆ.

**ಓಂ ಸಮನಾಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ಓಂ**
**ಓಂ ತದಪೀತೇಃ ಸಂಸಾರವ್ಯಪದೇಶಾತ್ ಓಂ**
**ಓಂ ಸೂಕ್ಷ್ಮಂ ಪ್ರಮಾಣತಶ್ಚ ತಥೋಪಲಬ್ಧೇಃ ಓಂ**
**ಓಂ ನೋಪಮರ್ದೇನಾತಃ ಓಂ**
**ಓಂ ಅಸ್ಯೈವ ಚೋಪಪತ್ತೇರೂಷ್ಮಾ ಓಂ**
**ಓಂ ಪ್ರತಿಷೇಧಾದಿತಿ ಚೇನ್ನಶಾರೀರಾತ್ ಓಂ**
**ಓಂ ಸ್ಪಷ್ಟೋ ಹ್ಯೇಕೇಷಾಮ್ ಓಂ**
**ಓಂ ಸ್ಮರ್ಯತೇ ಚ ಓಂ**

ಲಕ್ಷ್ಮೀದೇವಿಯೇ ಈ ಅಧಿಕರಣಕ್ಕೆ ವಿಷಯ. ಲಕ್ಷ್ಮೀದೇವಿಯು ಪರಮಾತ್ಮನಲ್ಲಿ ಲಯವನ್ನು ಹೊಂದುತ್ತಾಳೋ ಅಥವಾ ಇಲ್ಲವೋ ಎಂದು ಸಂಶಯ. ಲಕ್ಷ್ಮೀಯು ಭಗವಂತನ ಅಧೀನಳಾಗಿರುವುದೂ ಮತ್ತು ಅವಳ ನಿತ್ಯಮುಕ್ತತ್ವವು ಸಂಶಯಕ್ಕೆ ಕಾರಣ.

ಲಕ್ಷ್ಮೀದೇವಿಯು ಭಗವಂತನ ಅಧೀನಳಾಗಿದ್ದರಿಂದ ಭಗವಂತನಲ್ಲಿ ಲಯವನ್ನು ಹೊಂದುವಳು. ತೇಜಃ ಪರಸ್ಯಾಂ ದೇವತಾಯಾಮ್ ಎಂದು ಶ್ರುತಿಯೂ ಈ ವಿಷಯದಲ್ಲಿ ಆಧಾರವಾಗಿದೆ. ಲಕ್ಷ್ಮೀಯು ಸಂಸಾರಿಯಲ್ಲವೆಂದರೆ ಭಗವಂತನಿಂದ ಸರ್ವರೀತಿಯಲ್ಲೂ ಸಮಾನತೆ ಉಂಟಾಗುತ್ತದೆ. ನಿತ್ಯದಲ್ಲೂ ಸಂಸಾರರಹಿತಳೆಂದಾಗ ಭಗವಂತನಂತೆ ಸರ್ವಗುಣಗಳೂ ಲಕ್ಷ್ಮೀದೇವಿಯಲ್ಲೂ ಸಂಭವಿಸುತ್ತದೆ. ಆದ ಕಾರಣ ಲಕ್ಷ್ಮೀಯನ್ನು ಸಂಸಾರಿ ಎಂದೇ ಒಪ್ಪಬೇಕು. ಆದ್ದರಿಂದ ಲಕ್ಷ್ಮೀಗೂ ಭಗವಂತನಲ್ಲಿ ಲಯ ಇದೆ.

ಲಕ್ಷ್ಮೀದೇವಿಗೆ ಲಯವಿಲ್ಲ. ನಿತ್ಯಮುಕ್ತಳು ಲಕ್ಷ್ಮೀದೇವಿಯ ಉಪಾಸನೆಯಿಂದ ಮುಕ್ತತ್ವವನ್ನು ಪಡೆದವಳಲ್ಲ. ಭಗವಂತನಂತೆ ನಿತ್ಯಳೂ ಸರ್ವತ್ರವ್ಯಾಪ್ತಳೂ ಆಗಿದ್ದಾಳೆ. ಇಂತಹ ಲಕ್ಷ್ಮೀದೇವಿಗೆ ಸಂಸಾರವಾದರೂ ಹೇಗೆ ಸಾಧ್ಯ ? ದ್ವಾ ವಾವ ಸೃತ್ಯನುಪಕ್ರಮೌ ಪ್ರಕೃತಿಶ್ಚ ಪರಮಶ್ಚ ದ್ವಾವೇತೌ ನಿತ್ಯಮುಕ್ತೌ ನಿತ್ಯೌ ಚ ಸರ್ವಗತೌ ಚೈತೌ ಜ್ಞಾತ್ವಾ ವಿಮುಚ್ಯತೇ ಎಂಬ ಶ್ರುತಿಯು ಲಕ್ಷ್ಮೀದೇವಿಯನ್ನು ನಿತ್ಯಮುಕ್ತಳು ಸರ್ವಗತಳೆಂದೂ ಬಣ್ಣಿಸುತ್ತಿದೆ. ಹರೇರತ್ಯಂತಸಾಮೀಪ್ಯಂ ಲಯೋ ಲಕ್ಷ್ಮ್ಯಾ ಪ್ರಕೀರ್ತಿತಃ ಎಂಬ ಏಕಾದಶಸ್ಕಂಧತಾತ್ಪರ್ಯದ ಮಾತಿನಂತೆ ಭಗವಂತನ ಅತ್ಯಂತಸಾಮೀಪ್ಯವೇ ಲಕ್ಷ್ಮೀದೇವಿಗೆ ಲಯ. ತೇಜಃ ಪರಸ್ಯಾಂ ದೇವತಾಯಾಮ್ ಎಂಬ ಶ್ರುತಿಗೂ ಇದೇ ಅಭಿಪ್ರಾಯವಿದೆ. ಲಕ್ಷ್ಮೀದೇವಿಗೆ ನಿತ್ಯಮುಕ್ತತ್ವವಿದ್ದರೂ ಭಗವಂತನಿಂದ ಸರ್ವಸಾಮ್ಯವಿಲ್ಲ. ಕೇವಲ ದೇಶಕಾಲವ್ಯಾಪ್ತಿಗಳಿಂದ ಪರಮಾತ್ಮನ ಸಾಮ್ಯವಿದೆ ಹೊರತಾಗಿ ಗುಣದಿಂದ ಸಮಾನತೆ ಇಲ್ಲ.

## 7. ಪರಾಧಿಕರಣ

ಇದು ಏಕಸೂತ್ರಾಧಿಕರಣ. ಇಲ್ಲಿ ಎಲ್ಲ ದೇವತೆಗಳು ಭಗವಂತನಲ್ಲಿ ಲಯ ಹೊಂದುತ್ತಾರೆ ಎಂದು ಹೇಳಲಾಗಿದೆ.

ಭೂತಾಭಿಮಾನಿಗಳಲ್ಲಿ ಲಯ ಹೊರತಾಗಿ ಅಗ್ನಿಯಲ್ಲಿಯೇ ಎಲ್ಲರಿಗೂ ಲಯವಿಲ್ಲ. ಭೂತೇಷು ದೇವಾಃ ಎಂಬ ಶ್ರುತಿಯೇ ಈ ವಿಷಯದಲ್ಲಿ ಆಧಾರ. ಭೂತೇಷು ಎಂದು ನಿರವಕಾಶವಾದ ಬಹುವಚನವು ಶ್ರುತವಾಗಿರುವುದರಿಂದ ಅಗ್ನೌ ಸರ್ವೇ ದೇವಾ ವಿಲೀಯಂತೇ ಎಂಬ ಶ್ರುತಿಗೆ ಅರ್ಥಸಂಕೋಚವನ್ನು ಮಾಡಬೇಕು. ನಿಯಾಮಕರು ಅನೇಕರಿದ್ದರೂ ಯಾರಿಂದ ಹುಟ್ಟಿದ್ದಾನೆಯೋ ಅವನಲ್ಲಿ ಲಯವೆಂದು ನಿರ್ಣಯಿಸಲು ಸಾಧ್ಯವಿಲ್ಲ.

## 5. ಅನೇಕ ಲಯಾಧಿಕರಣ

ಇದು ಏಕಸೂತ್ರಾಧಿಕರಣ. ಇಲ್ಲಿ ಅಗ್ನಿಯಲ್ಲಿ ಎಲ್ಲರೂ ಲಯವನ್ನು ಹೊಂದುತ್ತಾರೆ ಎಂದು ಹೇಳಲಾಗಿದೆ.

ದೇವತೆಗಳೇ ಈ ಅಧಿಕರಣದ ವಿಷಯ. ದೇವತೆಗಳು ಎಲ್ಲ ಭೂತಗಳಲ್ಲಿ ಲಯವನ್ನು ಹೊಂದವರೋ ಅಥವಾ ಅಗ್ನಿಯಲ್ಲೇ ಲಯ ಹೊಂದುವರೋ ಎಂದು ಸಂಶಯ. ದೇವತೆಗಳು ಇತರರ ಅಧೀನರಾಗಿರುವುದು ಮತ್ತು ಅಗ್ನೌ ದೇವಾ ವಿಲೀಯಂತೇ ಎಂಬ ಶ್ರುತಿಯು ಸಂಶಯಕ್ಕೆ ಕಾರಣ.

ಎಲ್ಲ ದೇವತೆಗಳಿಗೂ ಅಗ್ನಿಯಲ್ಲಿಯೇ ಲಯ. ಅಗ್ನೌ ಸರ್ವೇ ದೇವಾ ವಿಲೀಯಂತೆ ಎಂಬ ಶ್ರುತಿಯೇ ಇದೆ. ಪಂಚಭೂತಗಳಲ್ಲಿ ಲಯವನ್ನು ಹೊಂದುವರು ಎಂಬ ವಿಷಯದಲ್ಲಿ ವಿಶೇಷಪ್ರಮಾಣವಿಲ್ಲ. ಅಗ್ನೌ ದೇವಾಃ ವಿಲೀಯಂತೇ ಎಂಬ ಶ್ರುತಿಗೆ ಗತ್ಯಂತರಕಲ್ಪನೆಯು ಸಾಧ್ಯವಿಲ್ಲವಾದ್ದರಿಂದ ಅದು ನಿರವಕಾಶವಾಗಿದೆ. ಅಗ್ನಿಯಲ್ಲೇ ದೇವತೆಗಳಿಗೆ ಲಯವಾದರೂ ಅಗ್ನಿಯು ತನ್ನ ಜನಕವಾದ ವಾಯುವಿನಲ್ಲಿ ವಾಯುವು ತನಗೆ ಜನಕವಾದ ಆಕಾಶದಲ್ಲಿ ಲಯವನ್ನು ಹೊಂದುವರು ಎಂದು ಪರಂಪರಾಲಯಾಭಿಪ್ರಾಯದಿಂದ ಭೂತೇಷು ದೇವಾ ವಿಲೀಯಂತೇ ಎಂಬ ಬಹುವಚನಾಂತಶ್ರುತಿಯು ಸಾವಕಾಶವೆಂದು ಹೇಳಬಹುದು. ಆದ್ದರಿಂದ ಅಗ್ನಿಯಲ್ಲೇ ದೇವತೆಗಳಿಗೆ ಲಯವೆನ್ನುವದು ಸಮಂಜಸ. ಪಂಚಭೂತಗಳಲ್ಲಿ ಲಯವೆನ್ನುವದು ಯುಕ್ತವಲ್ಲ.

ಪೃಥಿವ್ಯಾಮೃಭವೋ ..... ಹಾಗೂ ಋಭವಃ ಪೃಥಿವ್ಯಾಂ .....ಎಂಬ ಈ ಎರಡು ಶ್ರುತಿಗಳು ಪಂಚಭೂತಗಳಲ್ಲಿಯೂ ಪ್ರತ್ಯೇಕವಾಗಿ ದೇವತೆಗಳಿಗೆ ಲಯವನ್ನು ಹೇಳುತ್ತಿವೆ. ಆದ್ದರಿಂದ ವಿಶೇಷಪ್ರಮಾಣವಿಲ್ಲವೆಂದು ಹೇಳಬಾರದು. ಯಾವ ದೇವತೆಗಳಿಗೆ ಯಾವ ಭೂತಗಳಲ್ಲಿ ಲಯವೆಂದು ಹೇಳಲ್ಪಟ್ಟಿದೆಯೋ ಆ ಆ ದೇವತೆಗಳು ಆಯಾ ಭೂತಗಳಿಂದಲೇ ಹುಟ್ಟಿದವರಾಗಿದ್ದಾರೆ. ಈ ರೀತಿ ಪ್ರತ್ಯೇಕವಾಗಿ ಲಯವು ದೇವತೆಗಳಿಗೆ ಸಿದ್ಧವಾಗಿರುವುದರಿಂದ ಅಗ್ನೌ ಸರ್ವೇ ದೇವಾ ವಿಲೀಯಂತೇ ಎಂಬ ಶ್ರುತಿಗೆ ನಿರ್ದಿಷ್ಟರಾದ ದೇವತೆಗಳಿಗೆ ಅಗ್ನಿಯಲ್ಲಿ ಲಯವೆಂದು ಅಭಿಪ್ರಾಯ. ಇತರ ಭೂತಗಳಲ್ಲಿ ಪ್ರವೇಶವಿಲ್ಲದಿರುವ ಅಧಮರಿಗೆ ಪ್ರಾಯಃ ಅಗ್ನಿಯಲ್ಲೇ ಲಯ. ಅಗ್ನಿಪುತ್ರರಿಗೆ ಅಗ್ನಿಯಲ್ಲಿ ಲಯ ಎಂದು ಅಭಿಪ್ರಾಯ. ವಿಶಂತಿ ಶಿಷ್ಟಾ ಅಪಿ ಹವ್ಯವಾಹನಮ್ ಎಂದು ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಅಗ್ನಿಪುತ್ರರಿಗಿಂತ ಇತರರಾದ ಕೆಲವು ದೇವತೆಗಳೂ ಅಗ್ನಿಯಲ್ಲಿ ಲಯವನ್ನು ಹೊಂದುವರು. ಹೀಗೆ ಅಗ್ನೌ ಸರ್ವೇ ದೇವಾ ವಿಲೀಯಂತೆ ಎಂಬ ಶ್ರುತಿಯು ಸಾವಕಾಶವೇ ಆಗಿದೆ. ಆದ್ದರಿಂದ ಭೂತೇಷು ದೇವಾ ವಿಲೀಯಂತೆ ಎಂಬ ಶ್ರುತಿಯಿಂದ ಪಂಚಭೂತಗಳಲ್ಲಿಯೂ ದೇವತೆಗಳಿಗೆ ಲಯವೆಂದು ಹೇಳಿದ್ದು ಸಮಂಜಸವೇ ಆಗಿದೆ.

## ಸಮನಾಧಿಕರಣ

ಈ ಅಧಿಕರಣದಲ್ಲಿ ಒಟ್ಟು ಎಂಟು ಸೂತ್ರಗಳು. ಇಲ್ಲಿ ಲಕ್ಷ್ಮೀದೇವಿಗೆ ಲಯವಿಲ್ಲ ಎಂದು ಹೇಳಿದ್ದಾರೆ.

**ಓಂ ಸಮನಾಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ಓಂ**
**ಓಂ ತದಪೀತೇಃ ಸಂಸಾರವ್ಯಪದೇಶಾತ್ ಓಂ**
**ಓಂ ಸೂಕ್ಷ್ಮಂ ಪ್ರಮಾಣತಶ್ಚ ತಥೋಪಲಬ್ಧೇಃ ಓಂ**
**ಓಂ ನೋಪಮರ್ದೇನಾತಃ ಓಂ**
**ಓಂ ಅಸ್ಯೈವ ಚೋಪಪತ್ತೇರೂಷ್ಮಾ ಓಂ**
**ಓಂ ಪ್ರತಿಷೇಧಾದಿತಿ ಚೇನ್ನಶಾರೀರಾತ್ ಓಂ**
**ಓಂ ಸ್ಪಷ್ಟೋ ಹ್ಯೇಕೇಷಾಮ್ ಓಂ**
**ಓಂ ಸ್ಮರ್ಯತೇ ಚ ಓಂ**

ಲಕ್ಷ್ಮೀದೇವಿಯೇ ಈ ಅಧಿಕರಣಕ್ಕೆ ವಿಷಯ. ಲಕ್ಷ್ಮೀದೇವಿಯು ಪರಮಾತ್ಮನಲ್ಲಿ ಲಯವನ್ನು ಹೊಂದುತ್ತಾಳೋ ಅಥವಾ ಇಲ್ಲವೋ ಎಂದು ಸಂಶಯ. ಲಕ್ಷ್ಮೀಯು ಭಗವಂತನ ಅಧೀನಳಾಗಿರುವುದೂ ಮತ್ತು ಅವಳ ನಿತ್ಯಮುಕ್ತತ್ವವು ಸಂಶಯಕ್ಕೆ ಕಾರಣ.

ಲಕ್ಷ್ಮೀದೇವಿಯು ಭಗವಂತನ ಅಧೀನಳಾಗಿದ್ದರಿಂದ ಭಗವಂತನಲ್ಲಿ ಲಯವನ್ನು ಹೊಂದುವಳು. ತೇಜಃ ಪರಸ್ಯಾಂ ದೇವತಾಯಾಮ್ ಎಂದು ಶ್ರುತಿಯೂ ಈ ವಿಷಯದಲ್ಲಿ ಆಧಾರವಾಗಿದೆ. ಲಕ್ಷ್ಮೀಯು ಸಂಸಾರಿಯಲ್ಲವೆಂದರೆ ಭಗವಂತನಿಂದ ಸರ್ವರೀತಿಯಲ್ಲೂ ಸಮಾನತೆ ಉಂಟಾಗುತ್ತದೆ. ನಿತ್ಯದಲ್ಲೂ ಸಂಸಾರರಹಿತಳೆಂದಾಗ ಭಗವಂತನಂತೆ ಸರ್ವಗುಣಗಳೂ ಲಕ್ಷ್ಮೀದೇವಿಯಲ್ಲೂ ಸಂಭವಿಸುತ್ತದೆ. ಆದ ಕಾರಣ ಲಕ್ಷ್ಮೀಯನ್ನು ಸಂಸಾರಿ ಎಂದೇ ಒಪ್ಪಬೇಕು. ಆದ್ದರಿಂದ ಲಕ್ಷ್ಮೀಗೂ ಭಗವಂತನಲ್ಲಿ ಲಯ ಇದೆ.

ಲಕ್ಷ್ಮೀದೇವಿಗೆ ಲಯವಿಲ್ಲ. ನಿತ್ಯಮುಕ್ತಳು ಲಕ್ಷ್ಮೀದೇವಿಯ ಉಪಾಸನೆಯಿಂದ ಮುಕ್ತತ್ವವನ್ನು ಪಡೆದವಳಲ್ಲ. ಭಗವಂತನಂತೆ ನಿತ್ಯಳೂ ಸರ್ವತ್ರವ್ಯಾಪ್ತಳೂ ಆಗಿದ್ದಾಳೆ. ಇಂತಹ ಲಕ್ಷ್ಮೀದೇವಿಗೆ ಸಂಸಾರವಾದರೂ ಹೇಗೆ ಸಾಧ್ಯ ? ದ್ವೌ ವಾವ ಸೃತ್ಯನುಪಕ್ರಮೌ ಪ್ರಕೃತಿಶ್ಚ ಪರಮಶ್ಚ ದ್ವಾವೇತೌ ನಿತ್ಯಮುಕ್ತೌ ನಿತ್ಯೌ ಚ ಸರ್ವಗತೌ ಚೈತೌ ಜ್ಞಾತ್ವಾ ವಿಮುಚ್ಯತೇ ಎಂಬ ಶ್ರುತಿಯು ಲಕ್ಷ್ಮೀದೇವಿಯನ್ನು ನಿತ್ಯಮುಕ್ತಳು ಸರ್ವಗತಳೆಂದೂ ಬಣ್ಣಿಸುತ್ತಿದೆ. ಹರೇರತ್ಯಂತಸಾಮೀಪ್ಯಂ ಲಯೋ ಲಕ್ಷ್ಮ್ಯಾಃ ಪ್ರಕೀರ್ತಿತಃ ಎಂಬ ಏಕಾದಶಸ್ಕಂಧತಾತ್ಪರ್ಯದ ಮಾತಿನಂತೆ ಭಗವಂತನ ಅತ್ಯಂತಸಾಮೀಪ್ಯವೇ ಲಕ್ಷ್ಮೀದೇವಿಗೆ ಲಯ. ತೇಜಃ ಪರಸ್ಯಾಂ ದೇವತಾಯಾಮ್ ಎಂಬ ಶ್ರುತಿಗೂ ಇದೇ ಅಭಿಪ್ರಾಯವಿದೆ. ಲಕ್ಷ್ಮೀದೇವಿಗೆ ನಿತ್ಯಮುಕ್ತತ್ವವಿದ್ದರೂ ಭಗವಂತನಿಂದ ಸರ್ವಸಾಮ್ಯವಿಲ್ಲ. ಕೇವಲ ದೇಶಕಾಲವ್ಯಾಪ್ತಿಗಳಿಂದ ಪರಮಾತ್ಮನ ಸಾಮ್ಯವಿದೆ ಹೊರತಾಗಿ ಗುಣದಿಂದ ಸಮಾನತೆ ಇಲ್ಲ.

## 7. ಪರಾಧಿಕರಣ

ಇದು ಏಕಸೂತ್ರಾಧಿಕರಣ. ಇಲ್ಲಿ ಎಲ್ಲ ದೇವತೆಗಳು ಭಗವಂತನಲ್ಲಿ ಲಯ ಹೊಂದುತ್ತಾರೆ ಎಂದು ಹೇಳಲಾಗಿದೆ.

ಸರ್ವೇ ದೇವಾ ಭೂತೇಷು ವಿಶಂತಿ ಎಂಬಲ್ಲಿ ಹೇಳಲ್ಪಟ್ಟ ದೇವತೆಗಳೇ ಈ ಅಧಿಕರಣದ ವಿಷಯ. ಅವರು ತಮಗಿಂತ ಉತ್ತರಮರಲ್ಲಿ ಲಯ ಹೊಂದುವರು. ಇದರಿಂದಲೇ ಭಗವಂತನಲ್ಲಿ ಅವರಿಗೆ ಪ್ರವೇಶಾಪ್ರವೇಶಗಳೆರಡೂ ಸಂಭಾವ್ಯವಾದ್ದರಿಂದ ಭಗವಂತನಲ್ಲಿ ಲಯ ಹೊಂದುವರೋ ಅಥವಾ ಇಲ್ಲವೋ ಎಂದು ಸಂಶಯ.

ದೇವತೆಗಳಿಗೆ ಭಗವಂತನಲ್ಲಿ ಲಯವಿಲ್ಲ. ಪ್ರತಿಬಿಂಬವು ಬಿಂಬಾಧೀನವಾಗಿ ಬಿಂಬಸದೃಶವೂ ಆಗಿರುತ್ತದೆ. ಇಂತಹ ಪ್ರತಿಬಿಂಬವು ತನ್ನ ನಿಯಾಮಕವಾದ ಬಿಂಬದಲ್ಲಿ ಲಯವನ್ನು ಹೊಂದುವದು. ಪ್ರತಿಬಿಂಬೋ ಹರೇಃ ಪ್ರಾಣಃ ಪ್ರಾಣಸ್ಯಾನ್ಯೇ ಕಲಾ ಕ್ರಮಾತ್ ಎಂಬ ಪ್ರಮಾಣದಂತೆ ಪ್ರಾಣನೊಬ್ಬನೇ ಭಗವಂತನ ಪ್ರತಿಬಿಂಬ. ಆದ್ದರಿಂದ ಆ ಪ್ರಾಣನಿಗೆ ಮಾತ್ರ ಭಗವಂತನಲ್ಲಿ ಪ್ರವೇಶರೂಪವಾದ ಮೋಕ್ಷವು. ಉಳಿದ ಜ್ಞಾನಿಗಳಿಗೆ ಭಗವಂತನಲ್ಲಿ ಪ್ರವೇಶರೂಪ ಮೋಕ್ಷವಿಲ್ಲ.

ದೇವತೆಗಳೆಲ್ಲರೂ ಕ್ರಮವಾಗಿ ಪ್ರಾಣಪ್ರತಿಬಿಂಬರಾದರೂ ಸರ್ವೇ ದೇವಾಃ ಪ್ರಾಣಮಾವಿಶ್ಯ ದೇವೇ ಮುಕ್ತಾ ಲಯಂ ಪರಮೇ ಯಾಂತ್ಯಚಿಂತ್ಯೇ ಎಂಬ ಶ್ರುತಿವಾಕ್ಯದಂತೆ ಚತುರ್ಮುಖನ ಮೂಲಕ ಪರಮಾತ್ಮನಲ್ಲಿ ಎಲ್ಲ ದೇವತೆಗಳಿಗೂ ಲಯವಿದೆ. ಚತುರ್ಮುಖಬ್ರಹ್ಮನು ಪರಮಾತ್ಮನನ್ನು ಪ್ರವೇಶಿಸಿದಾಗ ಚತುರ್ಮುಖನಲ್ಲಿ ಪ್ರವೇಶಿಸಿದ ಇತರ ಎಲ್ಲ ದೇವತೆಗಳಿಗೂ ಪರಮಾತ್ಮನಲ್ಲಿ ಲಯವು ಅಪರಿಹಾರ್ಯವು. ಆಭಾಸ ಏವ ಚ ಎಂಬ ಸೂತ್ರದಲ್ಲಿ ಹೇಳಿದಂತೆ ಅಶೇಷಜೀವರೂ ಪರಂಪರಯಾ ಭಗವಂತನ ಪ್ರತಿಬಿಂಬರೇ ಆಗಿದ್ದಾರೆ. ಆದ್ದರಿಂದ ಎಲ್ಲ ಜ್ಞಾನಿಗಳಿಗೂ ಪರಮಾತ್ಮನಲ್ಲಿ ಪ್ರವೇಶರೂಪ ಮೋಕ್ಷವಿದೆ.

## 8. ಅವಿಭಾಗಾಧಿಕರಣ

ಇದು ಏಕಸೂತ್ರಾಧಿಕರಣ. ಇಲ್ಲಿ ಮುಕ್ತರು ಭಗವದಿಚ್ಛೆಗೆ ಅಧೀನರಾಗಿ ಇಚ್ಛಿಸುತ್ತಾರೆ ಎಂದು ಹೇಳಲಾಗಿದೆ. ದೇವತೆಗಳೇ ಈ ಅಧಿಕರಣದ ವಿಷಯ. ಅವರು ಮುಕ್ತಿಯಲ್ಲಿ ಸ್ವತಂತ್ರರೋ ಅಥವಾ ಅಸ್ವತಂತ್ರರೋ ಎಂದು ಸಂಶಯ. ಮುಕ್ತತ್ವವೂ ಸ್ವಾತಂತ್ರ್ಯವು ಭಗವಂತನ ಧರ್ಮವಾಗಿರುವುದೂ ಸಂಶಯಕ್ಕೆ ಕಾರಣ.

ಮುಕ್ತರಾದ್ದರಿಂದಲೇ ದೇವತೆಗಳು ಮುಕ್ತಿಯಲ್ಲಿ ಸ್ವತಂತ್ರರು. ಅಸ್ವತಂತ್ರರು ಎಂದಲ್ಲಿ ಸಂಸಾರಿಗಳಂತೆ ಅವರಿಗೂ ದುಃಖಾದಿಗಳು ಉಂಟಾಗಬೇಕಿತ್ತು. ಏತೇ ದೇವಾ ಏತಮಾತ್ಮಾನಮನುವಿಶ್ಯ ಸತ್ಯಾಃ ಸತ್ಯಕಾಮಾಃ ಸತ್ಯಸಂಕಲ್ಪಾಃ ಎಂಬ ಶ್ರುತಿಯು ಸಾಯುಜ್ಯಮುಕ್ತಿಯನ್ನು ಹೊಂದಿದ ದೇವತೆಗಳಿಗೆ ಸತ್ಯಕಾಮತ್ವಾದಿಗಳನ್ನು ಹೇಳಿದೆ. ಪರಾಧೀನರಲ್ಲಿ ಸತ್ಯಕಾಮತ್ವಾದಿಗಳು ಯುಕ್ತವಾಗುವದಿಲ್ಲ. ಆದ್ದರಿಂದ ಮುಕ್ತರೂ ಸ್ವತಂತ್ರರೇ ಆಗಿದ್ದಾರೆ. ಹೀಗಿರುವಾಗ ದೇವತೆಗಳಿಗೆ ಈಶಾಧೀನತ್ವರೂಪ ಪ್ರತಿಬಿಂಬತ್ವವನ್ನು ಹೇಳಿದ್ದು ಸಮಂಜಸವಲ್ಲ.

ಮುಕ್ತರು ಪರಮಾತ್ಮನ ಅಧೀನರೇ ಆಗಿದ್ದಾರೆ. ಎಂದಿಗೂ ಸ್ವತಂತ್ರರಲ್ಲ. ಕಾಮೇನ ಮೇ ಕಾಮ ಆಗಾತ್ ಹೃದಯಾದ್ಧೃದಯಂ ಮೃತ್ಯೋಃ ಎಂಬ ಶ್ರುತಿಯು ಹೇಳುವಂತೆ ಸತ್ಯಕಾಮತ್ವವೆಂದರೆ ಭಗವಂತನ ಇಚ್ಛಾನುಸಾರಿಯಾಗಿಯೇ ಮುಕ್ತರ ಇಚ್ಛೆ ಇರುವುದು ಹೊರತು ಅದು ಸ್ವತಂತ್ರವಲ್ಲ. ಈಶೇಚ್ಛಾನುಸಾರಿಯಾಗದ ನಮ್ಮ ಇಚ್ಛೆ ನೆರವೇರದಿರುವಾಗ ನಮಗೆ ದುಃಖದ ಪ್ರಸಕ್ತಿಯೇ ಇಲ್ಲ. ಹೀಗೆ ಮುಕ್ತರೂ ಭಗವಂತನ ಅಧೀನರೇ ಆಗಿದ್ದಾರೆ.

## 9. ಹೃದಯಾಗ್ರಜ್ವಲನಾಧಿಕರಣ

ಈ ಅಧಿಕರಣದಲ್ಲಿ ಒಟ್ಟು ಐದು ಸೂತ್ರಗಳು.

**1. ಓಂ.ತದೋಕೋಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಃ ಶತಾಧಿಕಯಾ ಓಂ**

**2. ಓಂ ರಶ್ಮ್ಯನುಸಾರೀ ಓಂ**

**3. ಓಂ ನಿಶಿ ನೇತಿ ಚೇನ್ನ ಸಂಬಂಧಾತ್ ಓಂ**

**4. ಓಂ ಯಾವದ್ ದೇಹಭಾವಿತ್ವಾದ್ ದರ್ಶಯತಿ ಓಂ**

**5. ಓಂ ಅತಶ್ಚಾಯನೇಪಿ ಹಿ ದಕ್ಷಿಣೇ ಓಂ**

ಮುಕ್ತಿಯೋಗ್ಯರು ದೇಹೋತ್ಕ್ರಮಣಕಾಲದಲ್ಲಿ ಹೃದಯದಲ್ಲಿ ಬೆಳಗುವ ಭಗವಂತನ ತೇಜಸ್ಸಿನಿಂದ ಪ್ರಕಾಶಿತ ನಾಡೀದ್ವಾರಾ ಬ್ರಹ್ಮನಾಡಿಯ ಮೂಲಕ ಹೋಗುತ್ತಾರೆ.

ಜ್ಞಾನಿಗಳ ಉತ್ಕ್ರಮಣವೇ ಈ ಅಧಿಕರಣದ ವಿಷಯ. ಅಜ್ಞಜನರ ಮರಣದಂತೆಯೇ ಜ್ಞಾನಿಯ ಮರಣವೋ ಅಥವಾ ವಿಲಕ್ಷಣವೋ ಎಂದು ಸಂಶಯ. ಇಬ್ಬರಲ್ಲೂ ಸಾಧಾರಣವಾದ ಮರಣ ಹಾಗೂ ಜ್ಞಾನಿಯಲ್ಲಿರುವ ಜ್ಞಾನಿತ್ವವೇ ಸಂಶಯಕ್ಕೆ ಕಾರಣ.

ಜ್ಞಾನಿಗೂ ಸಹ ಪ್ರಾರಬ್ಧಕರ್ಮವಿರುವುದರಿಂದ ಅವನ ಮರಣಕ್ಕೂ ಅದೇ ನಿಮಿತ್ತವಾದ್ದರಿಂದ ಪಾಮರ ಜನರ ಮರಣದಂತೆಯೇ ಜ್ಞಾನಿಯ ಮರಣ. ಪ್ರಾರಬ್ಧಕರ್ಮವು ದೇಹತ್ಯಾಗದವರೆಗೂ ಇರುವದು. ಆದ್ದರಿಂದ ಜ್ಞಾನಿಮರಣವನ್ನು ವಿಲಕ್ಷಣವೆನ್ನಲು ಯಾವುದೇ ವಿಶೇಷಕಾರಣಗಳೂ ಇಲ್ಲ. ಈ ರೀತಿ ಇಬ್ಬರ ಮರಣದಲ್ಲಿಯೂ ವೈಲಕ್ಷಣ್ಯವಿಲ್ಲದಿರುವದರಿಂದ ಜ್ಞಾನದಲ್ಲಿ ಅತಿಶಯತೆ ಇಲ್ಲ.

ಮನೋಭಿಮಾನಿದೇವತೆಯಲ್ಲಿ ವಾಗಭಿಮಾನಿದೇವತೆಯು ವಿಲೀನರಾಗುವರು. ಆಧಾರವೇನೆಂದರೆ ಮನೋನುಸಾರವಾಗಿ ವಾಕ್ ಪ್ರವೃತ್ತಿಯು ಪ್ರತ್ಯಕ್ಷಸಿದ್ಧವಾದ್ದರಿಂದ, ಶ್ರುತಿಯೂ ಇರುವದರಿಂದ.

ಇತರರ ಮರಣಕ್ಕಿಂತಲೂ ಜ್ಞಾನಿಯ ಮರಣದಲ್ಲಿ ವಿಶೇಷವಿದೆ. ಜ್ಞಾನಿಯಾದ ಜೀವನ ದೇಹೋತ್ಕ್ರಮಣಕಾಲದಲ್ಲಿ ಭಗವದಾಶ್ರಯವಾದ ಅವನ ಹೃದಯದ ಅಗ್ರಭಾಗದಲ್ಲಿ ಭಗವಂತನ ಪ್ರಕಾಶವು ಬೆಳಗುತ್ತದೆ. ಆಗ ಜ್ಞಾನಿಯು ಆ ಪ್ರಕಾಶಗೊಂಡ ನಾಡೀದ್ವಾರದ ಮೂಲಕ ನಾಡಿಯಲ್ಲಿ ಸಂಚರಿಸಿ ದೇಹದಿಂದ ಹೊರಬೀಳುತ್ತಾನೆ. ಆ ಜ್ಞಾನಿಯ ಮರಣವು ಈ ರೀತಿಯಲ್ಲ. ಜ್ಞಾನಿಗೆ ಪ್ರಾರಬ್ಧಕರ್ಮವಿದ್ದರೂ ಭಗವಂತನ ಸಾಕ್ಷಾತ್ಕಾರಸಾಮರ್ಥ್ಯದಿಂದ ವಿಶಿಷ್ಟರೀತಿಯಲ್ಲಿ ಉತ್ಕ್ರಮಣವು ಉಂಟಾಗುತ್ತದೆ.

ಸ್ವೋದಯಾತ್ ಫಲದಂ ಜ್ಞಾನಮಾದೇಹಂ ಕರ್ಮ ವಾ ರವೇಃ ಎಂಬ ಪ್ರಮಾಣವಾಕ್ಯದಂತೆ ಅಪರೋಕ್ಷಜ್ಞಾನ ಉಂಟಾದಂದಿನಿಂದಲೇ ಅದು ಫಲವನ್ನು ನೀಡುತ್ತದೆ. ಜ್ಞಾನಸಾಮರ್ಥ್ಯದಿಂದ ಹಿಂದಿನ ಮರಣದಲ್ಲಿಯೇ ಈ ರೀತಿಯ ಉತ್ಕ್ರಮಣವು ಉಂಟಾಗಲು ಸಾಧ್ಯವಿಲ್ಲ. ಏಕೆಂದರೆ ಕೇವಲ ಜ್ಞಾನಸಾಮರ್ಥ್ಯದಿಂದ ಈ ರೀತಿಯ ಉತ್ಕ್ರಮಣವಾಗುವದಿಲ್ಲ. ಶರೀರತ್ಯಾಗ ಕಾಲದಲ್ಲಿ ತನ್ನ ಹೃದಯದಿಂದ ಆರಂಭಿಸಿ ಬ್ರಹ್ಮಪರ್ಯಂತರ ಗಮನಮಾರ್ಗದ ಸ್ಮರಣೆಯು ಸಹಕಾರಿಯಾಗಿದೆ. ಆ ಸ್ಮರಣೆಯು

ಕರ್ಮಕ್ಷಯವಾದ ಸಮಯದಲ್ಲಿ ಮಾತ್ರ ಉಂಟಾಗುತ್ತದೆ. ಗತಿಯ ಸ್ಮರಣೆಯು ಬ್ರಹ್ಮಪ್ರಾಪ್ತಿಗೆ ಕಾರಣ ಎಂಬ ವಿಷಯದಲ್ಲಿ ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಮ್ ತಂ ತಮೇವೇತಿ ಕೌಂತೇಯ ಸದಾ ತದ್ಭಾವಭಾವಿತಃ ಎಂಬ ಗೀತಾವಾಕ್ಯವೇ ಪ್ರಮಾಣ. ಕೇವಲ ಗತ್ಯನುಸ್ಮೃತಿಯಿಂದ ಸಹಿತವಾದ ಜ್ಞಾನಸಾಮರ್ಥ್ಯದಿಂದಲೇ ಜ್ಞಾನಿಯಾದ ಜೀವನ ಉತ್ಕ್ರಮಣವಲ್ಲ. ಪರಮಾತ್ಮನಿಂದ ಅನುಗೃಹೀತನಾದ ಜೀವನು ಸುಷುಮ್ನಾನಾಡಿಯ ಮೂಲಕ ದೇಹದಿಂದ ನಿರ್ಗಮಿಸುವನು.

## ಪ್ರತಿಸ್ಮರಣಾಧಿಕರಣ

ಈ ಏಕಸೂತ್ರಾಧಿಕರಣ.

**ಓಂ ಯೋಗಿನಃ ಪ್ರತಿ ಸ್ಮರ್ಯೇತೇ ಸ್ಮಾರ್ತೇ ಚೈತೇ ಓಂ**

ತನ್ನ ಹೃದಯದಿಂದ ಆರಂಭಿಸಿ ಬ್ರಹ್ಮಪರ್ಯಂತ ಗತಿಯೇ ಈ ಅಧಿಕರಣದ ವಿಷಯ. ಆ ಗತಿಯು ಬ್ರಹ್ಮಜ್ಞಾನ ಮತ್ತು ಗತ್ಯನುಸ್ಮೃತಿಯ ಸಾಪೇಕ್ಷವೋ ಅಥವಾ ಅಲ್ಲವೋ ಎಂದು ಸಂಶಯ. ಹಿಂದಿನ ಅಧಿಕರಣದಲ್ಲಿ ಜ್ಞಾನ ಮತ್ತು ಗತ್ಯನುಸ್ಮೃತಿಯು ಅಗತ್ಯವೆಂದು ಹೇಳಲ್ಪಟ್ಟಿದೆ. ಆದರೆ ಸ್ಪಷ್ಟಪ್ರಮಾಣವು ಕಂಡಿಲ್ಲ.

ಗಮನಕ್ಕೆ ಜ್ಞಾನಗತಿಸ್ಮೃತಿಗಳ ಅಪೇಕ್ಷೆ ಇಲ್ಲ ಕೃಷ್ಯಾದಿಗಳಲ್ಲಿ ಫಲಾನುಸ್ಮರಣೆ ಇಲ್ಲದಿದ್ದರೂ ಫಲವು ಕಂಡಿದೆ. ಅದೇ ರೀತಿ ಪ್ರಕೃತದಲ್ಲಿಯೂ ಸಹ. ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ದಕ್ಷಿಣಾಯನಮ್ ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ಮುಂತಾದ ವಾಕ್ಯಗಳಲ್ಲಿ ಗತಿಯನ್ನು ಕಾಲಾದಿಗಳ ಅಧೀನವೆಂದು ಹೇಳಲಾಗಿದೆ. ಅಂದರೆ ಬ್ರಹ್ಮ-ಚಂದ್ರರನ್ನು ಹೊಂದಲು ಆಯಾ ಕಾಲಗಳ ಮರಣವೇ ಕಾರಣ. ಬೇರೆ ಯಾವುದೂ ಕಾರಣವಲ್ಲವೆಂದು ತಿಳಿಯುತ್ತದೆ. ಆದ್ದರಿಂದ ಮೋಕ್ಷಕ್ಕೆ ಜ್ಞಾನವು ಸಾಧನವಲ್ಲ.

ಬ್ರಹ್ಮ-ಚಂದ್ರಗತಿಗಳು ಕೇವಲ ಜ್ಞಾನಾದಿಗಳಿಂದ ಹೊಂದಲ್ಪಡುವವು ಹೊರತಾಗಿ ಕಾಲಾದಿಗಳಿಂದ ಅಲ್ಲ. ಅಗ್ನಿರ್ಜ್ಯೋತಿರಹಃ ಶುಕ್ಲಃ ಎಂಬ ಪ್ರಮಾಣವಾಕ್ಯದಲ್ಲಿ ಬ್ರಹ್ಮವಿದಃ ಎಂದು ಧೂಮೋ ರಾತ್ರಿಸ್ತಥಾ ಕೃಷ್ಣಃ ಎಂಬಲ್ಲಿ ಯೋಗೀ ಎಂದೂ ವಿಶೇಷಣವಿದೆ. ಅಂದರೆ ಬ್ರಹ್ಮಜ್ಞಾನಿಗಳು ಉತ್ತರಾಯಣಾಭಿಮಾನಿದೇವತಾ-ಲೋಕಗಳ ಮೂಲಕ ಪರಮಾತ್ಮನನ್ನು ಹೊಂದುವರು. ಸಕಾಮಕರ್ಮಿಯು ಚಂದ್ರಲೋಕವನ್ನು ಹೊಂದಿ ಪುನಃ ಭೂಮಿಯಲ್ಲಿ ಜನಿಸುವನು ಹೀಗೆ ಆ ವಿಶೇಷಣಗಳಿಂದ ಜ್ಞಾನಕರ್ಮರೂಪ ಸಾಧನಗಳಿಂದ ಬ್ರಹ್ಮಚಂದ್ರಲೋಕಗಳು ಪ್ರಾಪ್ಯವೆಂದು ತಿಳಿಯುತ್ತದೆ. ಕಾಲಮೃತಿಗಳ ಅಧೀನವೆಂದು ಆ ಪ್ರಮಾಣಗಳು ಹೇಳುವುದಿಲ್ಲ. ಅಭಿಮಾನ್ಯಧಿಕರಣದಲ್ಲಿ ಹೇಳಿದಂತೆ ಅಹರಾದಿಗಳು ದೇವತೆಗಳಾಗಿವೆ ಹೊರತಾಗಿ ಕಾಲವಲ್ಲ. ಆದ್ದರಿಂದ ಜ್ಞಾನ ಗತಿಸ್ಮೃತಿಗಳು ಅವಶ್ಯಕವೇ ಆಗಿವೆ. ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಮ್ ಎಂದು ಸ್ಮೃತಿಯಲ್ಲಿ ಶರೀರತ್ಯಾಗಕಾಲದಲ್ಲಿ ಯಾವುದರ ಸ್ಮರಣೆಯೋ ಅದೇ ಪ್ರಾಪ್ಯವೆಂದು ಹೇಳಿರುವುದರಿಂದ ಗತಿಯ ಸ್ಮರಣೆಯೂ ಅವಶ್ಯಕವಾಗಿದೆ. ಮಹಾತ್ಮರಿಗೆ ದೇಹಾಭಿಮಾನವಿಲ್ಲದಿರುವದರಿಂದ ದೇಹ ತ್ಯಾಗದ ದುಃಖವಿರುವುದಿಲ್ಲ. ಆದ್ದರಿಂದ ಗತಿಸ್ಮರಣೆಗೆ ದುಃಖರೂಪ ಪ್ರತಿಬಂಧಕವಿರುವುದಿಲ್ಲ.

**ಇತಿ ಚತುರ್ಥಾಧ್ಯಾಯಸ್ಯ ದ್ವಿತೀಯಃ ಪಾದಃ**

## ಅಥ ಚತುರ್ಥಾಧ್ಯಾಯಸ್ಯ ತೃತೀಯಃ ಪಾದಃ



### 1. ಅರ್ಚಿರಾದ್ಯಧಿಕರಣ

ಇದು ಏಕಸೂತ್ರಾಧಿಕರಣ. ಈ ಅಧಿಕರಣದಲ್ಲಿ ಬ್ರಹ್ಮನನ್ನು ಸೇರಲು ಅರ್ಚಿರಾದಿಗಳು ಮಾರ್ಗಗಳು ಎಂದು ಹೇಳಲಾಗಿದೆ.

ಬ್ರಹ್ಮಪ್ರಾಪ್ತಿಮಾರ್ಗವೇ ಈ ಅಧಿಕರಣದ ವಿಷಯ. ಅದು ಅರ್ಚಿರಾದಿಯೋ ಅಥವಾ ವಾಯ್ವಾದಿಯೋ 'ತೇ ಅರ್ಚಿಷಮಭಿಸಂವಂತ್ಯರ್ಚಿಷೋ ಅಹ್ನರಹ್ನ ಆಪೂರ್ಯಮಾಣಪಕ್ಷಮ್' ಎಂಬ ಶ್ರುತಿಯಲ್ಲಿ ಅರ್ಚಿಲೋಕಕ್ಕೆ ಪ್ರಾಥಮ್ಯವು ಶ್ರುತವಾಗಿದೆ. 'ಯದಾ ಹ ವೈ ಪುರುಷೋ ಅಸ್ಮಾಲ್ಲೋಕಾತ್ ಪ್ರೈತಿ ಸ ವಾಯುಮಾಗಚ್ಛತಿ' ಎಂದು ಶ್ರುತಿಯಲ್ಲಿ ವಾಯುಲೋಕವನ್ನು ಕುರಿತು ತೆರಳುವನೆಂದು ಹೇಳುತ್ತಿದೆ. ಹೀಗೆ ಈ ಎರಡು ಶ್ರುತಿಗಳಿರುವುದು ಸಂಶಯಕ್ಕೆ ಕಾರಣ.

ಸಂಶಯಕಾರಣವಾಗಿ ಹೇಳಿದ ಎರಡು ಶ್ರುತಿಗಳೂ ನಿರವಕಾಶವಾಗಿವೆ. ಅದರಿಂದ ಶ್ರುತಿಗಳಿಂದ ಹೇಳಲ್ಪಟ್ಟ ಅರ್ಚಿ ವಾಯು ಇಬ್ಬರಿಗೂ ಪ್ರಾಥಮ್ಯವು ಮಾರ್ಗಭೇದದಿಂದ ಯುಕ್ತವಾಗುವದು ಅಥವಾ ಅಧಿಕಾರಿಭೇದದಿಂದ ವಿರೋಧವು ಪರಿಹೃತವಾಗುವದರಿಂದ ಅನೇಕ ಮಾರ್ಗವು ಯುಕ್ತವೇ ಆಗುವದು. ಹೀಗೆ ಬ್ರಹ್ಮಜ್ಞಾನಿಗೆ ತನ್ನ ಮಾರ್ಗ ನಿರ್ಣಯವಾಗದಿರುವುದರಿಂದ ಅನುಸ್ಮೃತಿಯು ಯುಕ್ತವಾಗುವುದಿಲ್ಲ.

ಮಾರ್ಗಭೇದದಿಂದ ಅರ್ಚಿವಾಯುಗಳಿಬ್ಬರಿಗೂ ಪ್ರಾಥಮ್ಯವನ್ನು ಕಲ್ಪಿಸಬಾರದು. 'ದ್ವಾವೇವ ಮಾರ್ಗೌ ಪ್ರಥಿತಾವರ್ಚಿರಾದಿರ್ವಿಪಶ್ಚಿತಾಮ್ ಧೂಮಾದಿಃ ಕರ್ಮಿಣಾಂ ಚೈವ ಸರ್ವವೇದ-ವಿನಿರ್ಣಯಾತ್' ಎಂಬ ಬ್ರಹ್ಮತರ್ಕದ ವಾಕ್ಯದಂತೆ ಬ್ರಹ್ಮಜ್ಞಾನಿಗೆ ಅರ್ಚಿನಾಮಕದೇವತೆಯುಳ್ಳ ಅರ್ಚಿರಾದಿಮಾರ್ಗ ಒಂದೇ ಹೊರತು ಇತರ ಮಾರ್ಗ ಇಲ್ಲ. 'ತೇ ಅರ್ಚಿಷಮಭಿಗಚ್ಛತಿ' ಶ್ರುತಿಗಿಂತಲೂ ಪ್ರಬಲವಾಗಿದೆ. 'ಸ ವಾಯುಮಭಿಗಚ್ಛತಿ' ಶ್ರುತಿಗೆ ಅರ್ಚಿರ್ಲೋಕ ನಂತರದಲ್ಲಿ ಪ್ರಾಪ್ಯವಾದುದು ವಾಯುಲೋಕ ಎಂದೂ ಅರ್ಥೈಸಬಹುದು. ಹೀಗೆ ಮಾರ್ಗನಿರ್ಣಯವಾಗುವುದರಿಂದ ಅನುಸ್ಮೃತಿಯ ಅಗತ್ಯವಿದೆ.

### 2. ವಾಯುಗತ್ಯಧಿಕರಣ

ಇದು ಏಕಸೂತ್ರಾಧಿಕರಣ. ಇಲ್ಲಿ ಅರ್ಚಿರಾದಿಮಾರ್ಗದ ನಂತರ ವಾಯುವು ದ್ವಿತೀಯಪ್ರಾಪ್ಯ ಎಂದು ಹೇಳಲಾಗಿದೆ. ಮಾರ್ಗವೇ ವಿಷಯ. ವಾಯುದೇವತೆಯು ದ್ವಿತೀಯಪ್ರಾಪ್ಯನೋ ಅಥವಾ ಅಹರ್ದೇವತೆಯೋ ?ಎಂದು ಸಂಶಯ. 'ವಾಯುಮಾಗಚ್ಛತಿ ಅರ್ಚಿಷೋಽಹಃ' ಎಂಬ ಶ್ರುತಿವಿವಾದವೇ ಸಂಶಯಕ್ಕೆ ಕಾರಣ.

ಹಿಂದಿನ ಅಧಿಕರಣದಲ್ಲಿ ಹೇಳಿದ 'ದ್ವಾವೇವ ಮಾರ್ಗೌ ಕಥಿತೌ' ಎಂಬ ವಿಶೇಷವಚನದಿಂದ ಅರ್ಚಿರ್ದೇವತೆಯು ಪ್ರಥಮಪ್ರಾಪ್ಯನೆಂದು ಸಿದ್ಧವಾದರೂ ವಾಯುದೇವತೆಯು ದ್ವಿತೀಯಪ್ರಾಪ್ಯನೆಂಬ ವಿಷಯದಲ್ಲಿ ವಿಶೇಷವಚನವಿಲ್ಲ. 'ಅರ್ಚಿಷೋಽಹಃ ಸ ವಾಯುಮ್' ಎಂಬ ಎರಡು ವಿರುದ್ಧಶ್ರುತಿಗಳಿಗೂ ಪ್ರಮಾಣವೇ ಆಗಿವೆ. ಬೇರೆ ಬೇರೆ ಅಧಿಕಾರಿಗಳಿಗೆ ಮಾರ್ಗಭೇದದಿಂದ ಇಬ್ಬರು ದೇವತೆಗಳಿಗೂ ದ್ವಿತೀಯಪ್ರಾಪ್ಯತ್ವವನ್ನು ಹೇಳಿದಾಗ ವಿರೋಧಶಮನವಾಗುವುದು ಆದ್ದರಿಂದ ಮಾರ್ಗ ನಿರ್ಣಯವಾಗುವುದರಿಂದ ಸ್ಮೃತಿಯು ಕೂಡುವದಿಲ್ಲ.

'ಯದಾ ಹ ವೈ ಪುರುಷೋ ಅಸ್ಮಾಲ್ಲೋಕಾತ್ ಪ್ರೈತಿ ಸ ವಾಯುಮಾಗಚ್ಛತಿ' ಎಂಬುದು ಸಾಮಾನ್ಯವಚನ. ಇದರಿಂದ ಪ್ರಾಪ್ತವಾದ ವಾಯುವಿಗೆ ಪ್ರಥಮಪ್ರಾಪ್ಯತ್ವವು 'ತೇ ಅರ್ಚಿಷಮೇವಾಭಿಸಂವಿಶಂತಿ' ಎಂಬ ವಿಶೇಷವಚನದಿಂದ ಬಾಧಿತವಾಗುತ್ತದೆ. 'ಸ ಇತೋ ಗತೋ ದ್ವಿತೀಯಾಂ ಗತಿಂ ವಾಯುಮಾಗಚ್ಛತಿ' ಎಂಬ ವಿಶೇಷವಚನವಿರುವುದರಿಂದಲೂ ಸಹ ವಾಯುವು ದ್ವಿತೀಯಪ್ರಾಪ್ಯನೆಂದೇ ಸಿದ್ಧವಾಗುತ್ತದೆ. ಆದ್ದರಿಂದ 'ಸ ವಾಯುಮಾಗಚ್ಛತಿ' ಎಂಬ ಶ್ರುತಿಗೆ ವಾಯುವು ಅನಂತರ ಪ್ರಾಪ್ಯನೆಂಬ ಅರ್ಥವೇ ಸಮಂಜಸವಾಗಿದೆ.

## 3. ತಟಿದಧಿಕರಣ

ಇದು ಏಕಸೂತ್ರಾಧಿಕರಣ.

**ಓಂ ತಟಿತೋಽಧಿ ವರುಣಸ್ಸಂಭಂಧಾತ್ ಓಂ**

ಇಲ್ಲಿ ಸಂವತ್ಸರಲೋಕನಂತರ ತಟಿಲ್ಲೋಕ, ನಂತರ ವರುಣಲೋಕಪ್ರಾಪ್ತಿ ಎಂದು ಹೇಳಲಾಗಿದೆ.

ಮಾರ್ಗವೇ ಈ ಅಧಿಕರಣದ ವಿಷಯ. ಸಂವತ್ಸರಲೋಕಾನಂತರ ವರುಣಲೋಕವು ಪ್ರಾಪ್ಯವೋ ಅಥವಾ ತಟಿಲ್ಲೋಕವು ಪ್ರಾಪ್ಯವೋ ಎಂದು ಸಂಶಯ. 'ಮಾಸೇಭ್ಯಃ ಸಂವತ್ಸರಂ ಸಂವತ್ಸರಾತ್ ವರುಣಲೋಕಂ ವರುಣಲೋಕಾತ್ ಪ್ರಜಾಪತಿಲೋಕಮ್ ಎಂದು ಕೌಂಡಿನ್ಯಶ್ರುತಿಯು ಹೇಳುತ್ತದೆ. 'ಸಂವತ್ಸರಾತ್ ತಟಿತಮಾಗಚ್ಛತಿ ತಟಿತಃ ಪ್ರಜಾಪತಿಲೋಕಮ್' ಎಂದು ಗೌಪವನಶ್ರುತಿಯು ಹೇಳುತ್ತದೆ. ಈ ಶ್ರುತಿವಿವಾದವೇ ಸಂಶಯಕ್ಕೆ ಕಾರಣ.

ವರುಣ ತಟಿಲ್ಲೋಕಗಳೆರಡೂ ಸಂವತ್ಸರಲೋಕಾನಂತರ ಪ್ರಾಪ್ಯವಾಗಿದೆ. ಏಕೆಂದರೆ ಹಿಂದೆ ಹೇಳಿದ ಎರಡು ಶ್ರುತಿಗಳೂ ಪ್ರಮಾಣವೇ ಆಗಿವೆ. ಅಧಿಕಾರಿಭೇದದಿಂದ ಮಾರ್ಗಭೇದವು ಉಪಪನ್ನವೇ ಆಗಿದೆ. ತಟಿತ್ ವರುಣಲೋಕಗಳಲ್ಲಿ ಯಾವುದಕ್ಕೂ ಮೊದಲು ಪ್ರಾಪ್ಯವೆಂದು ಹೇಳಲು ಸ್ಪಷ್ಟಪ್ರಮಾಣಗಳಿಲ್ಲ ಹೀಗೆ ಮಾರ್ಗ ನಿರ್ಣಯವಾಗದಿರುವುದರಿಂದ ಮಾರ್ಗಾನುಸ್ಮರಣೆಯು ಅನುಪಪನ್ನವು.

ಅಧಿಕಾರಿಭೇದದಿಂದ ಸಂವತ್ಸರಲೋಕಾನಂತರ ವರುಣತಟಿಲ್ಲೋಕಗಳೆರಡೂ ಪ್ರಾಪ್ಯವೆಂದು ಕಲ್ಪಿಸಬಾರದು. ಎಲ್ಲ ಜ್ಞಾನಿಗಳಿಗೂ ಒಂದೇ ಮಾರ್ಗ. ಸಂವತ್ಸರಲೋಕಾನಂತರ ಎಲ್ಲ ಜ್ಞಾನಿಗಳೂ ತಟಿಲ್ಲೋಕವನ್ನು ಕುರಿತು ತೆರಳುವರು. ಸಂವತ್ಸರಾತ್ ವರುಣಲೋಕಮ್ ಎನ್ನುವ ಕೌಂಡಿನ್ಯಶ್ರುತಿಯ ವಿರೋಧವಿಲ್ಲ. ತಟಿಲ್ಲೋಕದ ನಂತರ ವರುಣಲೋಕವು ಪ್ರಾಪ್ಯವೆಂದು ಅದರ ಅಭಿಪ್ರಾಯ. 'ತತ್ರ ತಟಿತೋ

ವರುಣಂ ಗಚ್ಛತಿ ತಟಿತಾ ಹ್ಯೃಹ್ಯತೇ ವರುಣಲೋಕಸ್ತಟಿದುಪರಿ ಮುಕ್ತಾಮಯೋ ರಾಜತೇ ತತ್ರಾಸೌ ವರುಣೋ ರಾಜಾ ಸತ್ಯಾನೃತೇ ವಿವಿಂಚತಿ' ಈ ಶ್ರುತಿಯಲ್ಲಿ ತಟಿಲ್ಲೋಕವನ್ನು ಹೊಂದಿ ಅನಂತರ ವರುಣಲೋಕವನ್ನು ಕುರಿತು ಹೋಗುವವನು ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಆದ್ದರಿಂದ ಜ್ಞಾನಿಯು ಸಂವತ್ಸರಾನಂತರ ವರುಣಲೋಕವನ್ನು ಹೊಂದುವನು.

## 4. ಅತಿವಾಹಿಕಾಧಿಕರಣ

ಇದು ಎರಡು ಸೂತ್ರಗಳನ್ನೊಳಗೊಂಡ ಅಧಿಕರಣ.

**ಓಂ ಅತಿವಾಹಿಕಸ್ತಲ್ಲಿಂಗಾತ್ ಓಂ**
**ಓಂ ಉಭಯವ್ಯಾಮೋಹಾತ್ ತತ್ಸಿದ್ಧೇಃ ಓಂ**

ಇಲ್ಲಿ ಪೂರ್ವೋಕ್ತವಾಯುಲೋಕವು ಆತಿವಾಹಿಕವಾಯುಲೋಕವು ಮುಖ್ಯವಾಯುವಿನದಲ್ಲ.

ಪ್ರಕೃತನಾದ ವಾಯುವೇ ವಿಷಯ. ಬ್ರಹ್ಮಪ್ರಾಪ್ತಿಮಾರ್ಗದಲ್ಲಿ ಅರ್ಚಿರ್ದೇವತೆಯ ನಂತರ ಪ್ರಾಪ್ಯನಾದ ವಾಯು ಯಾರು ? ಮುಖ್ಯವಾಯುವೋ ಅಥವಾ ಅಮುಖ್ಯವಾಯುವೋ ಎಂದು ಸಂಶಯ. ವಾಯುಶಬ್ದವೇ ಸಂಶಯಕ್ಕೆ ಕಾರಣ.

ಅರ್ಚಿರ್ದೇವತೆಯ ಅನಂತರ ಪ್ರಾಪ್ಯನಾದವನು ಮುಖ್ಯವಾಯುವೇ ಏಕೆಂದರೆ ವಾಯುಶಬ್ದವು ಮುಖ್ಯವಾಯುವನ್ನು ಹೇಳುತ್ತಿದೆ. ತಾರತಮ್ಯಕ್ರಮವು ಇಲ್ಲಿ ವಿವಕ್ಷಿತವಾಗಿಲ್ಲ. ಬಾಧಕವಿದ್ದಿದ್ದರೆ ವಾಯುಶಬ್ದದಿಂದ ಅಮುಖ್ಯವಾಯುವನ್ನು ಸ್ವೀಕರಿಸಬಹುದಿತ್ತು. ಆದರೆ ಬಾಧಕವಿಲ್ಲ. ಪೂರ್ವಪ್ರಾಪ್ಯನಾದವನು ಆತಿವಾಹಿಕವಾಯು ಎಂಬಲ್ಲಿ ಯಾವ ಜ್ಞಾಪಕವೂ ಇಲ್ಲವಾದ ಕಾರಣ ಮುಖ್ಯವಾಯುವೇ ದ್ವಿತೀಯಪ್ರಾಪ್ಯ ಆದ್ದರಿಂದ ಮುಖ್ಯವಾಯುವಿಗೆ ಏನೂ ಮಹತ್ವವಿಲ್ಲ.

ಅರ್ಚಿರ್ದೇವತೆಯ ಅನಂತರ ಜ್ಞಾನಿಯಿಂದ ಪ್ರಾಪ್ಯನಾದವನು ಆತಿವಾಹಿಕವಾಯು ಹೊರತು ಮುಖ್ಯವಾಯುವಲ್ಲ. ಇದಕ್ಕೆ ಜ್ಞಾಪಕ ಪೂರ್ವಪ್ರಾಪ್ಯತ್ವ. ಈ ಪೂರ್ವಪ್ರಾಪ್ಯತ್ವವು ಅಮುಖ್ಯವಾಯುವಿಗೆ ಯುಕ್ತವಾಗುವುದು.

## 5. ವೈದ್ಯುತಾಧಿಕರಣ

ಇದು ಏಕಸೂತ್ರಾಧಿಕರಣ. ಇಲ್ಲಿ ಬ್ರಹ್ಮಪ್ರಾಪ್ತಿಮಾರ್ಗದಲ್ಲಿ ಮುಖ್ಯವಾಯುಲೋಕವೇ ಅಂತಿಮಪ್ರಾಪ್ಯ ಎಂದು ಹೇಳಲಾಗಿದೆ. ಪ್ರಕೃತವಾದ ಮಾರ್ಗವೇ ಇಲ್ಲಿ ವಿಷಯ. ಮುಖ್ಯವಾಯು ಹಾಗೂ ಪರಮಾತ್ಮ ಇವರ ಮಧ್ಯದಲ್ಲಿ ಪ್ರಾಪ್ಯನಾದವನು ಮತ್ತೊಬ್ಬನು ಇದ್ದಾನೋ ಅಥವಾ ಇಲ್ಲವೋ ಎಂದು ಸಂಶಯ.

ಮುಖ್ಯಪ್ರಾಣನ ಅನಂತರ ಪರಮಾತ್ಮನ ಮೊದಲು ಪ್ರಾಪ್ಯನು ಮತ್ತೊಬ್ಬನಿದ್ದಾನೆ ಎಂದು ಒಪ್ಪಿದರೆ ಅವನೇ ಉತ್ತಮನಾಗಬೇಕಾದೀತು ಎನ್ನುವುದು ಸರಿಯಲ್ಲ. ಏಕೆಂದರೆ ಉತ್ತಮತ್ವಕ್ರಮಾನುಗುಣವಾಗಿ ಪ್ರಾಪ್ತಿಕ್ರಮವಿಲ್ಲ. 'ಸೋಮಂ ವೈಶ್ವಾನರಂ ಚೇಂದ್ರಂ ಧ್ರುವಂ' ಎಂಬ ಸ್ಮೃತಿಯಲ್ಲಿ ಇಂದ್ರನಿಗಿಂತ ಕನಿಷ್ಠನಾದ ಧ್ರುವನಿಗೆ ಇಂದ್ರನ ಅನಂತರ ಪ್ರಾಪ್ತಿಯನ್ನು ಹೇಳಿದ್ದಾರೆ. ಆದ್ದರಿಂದ ವಾಯುವಿನ ಅನಂತರ ಪರಮಾತ್ಮನ

ಮೊದಲು ಪ್ರಾಪ್ಯನು ಮತ್ತೊಬ್ಬನಿದ್ದಾನೆ. ಎಂದರೆ ಬಾಧಕವಿಲ್ಲ. ಅದರಿಂದ ವಾಯುವಿಗೆ ಉತ್ತಮತ್ವ ಸಿದ್ಧಿಸುವುದಿಲ್ಲ.

ಬ್ರಹ್ಮಪ್ರಾಪ್ತಿಯು ವಾಯುವಿನಿಂದಲೇ ಆಗುವುದು ಹೊರತು ಇತರ ದೇವತೆಗಳಿಂದ ಅಲ್ಲ. 'ತತ್ಪುರುಷೋ ಮಾನವಃ ಸ ಏನಾನ್ ಬ್ರಹ್ಮ ಗಮಯತಿ' ಎಂದು ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ. ಯಾರು ಬ್ರಹ್ಮನನ್ನು ತಲುಪಿಸುವನೋ ಅವನೇ ಅಂತಿಮವಾಗಿ ಪ್ರಾಪ್ಯನು ಎನ್ನಬೇಕು.

'ವಿದ್ಯುತ್ತತ್ರಿರ್ವಾಯುರೇವ ನಯೇದ್ ಬ್ರಹ್ಮ ನ ಚಾಪರಃ' ಎಂಬ ಸ್ಮೃತಿಯೂ ಸಹ ಮುಖ್ಯಪ್ರಾಣನೇ ಬ್ರಹ್ಮಪ್ರಾಪಕ. ಮತ್ತೊಬ್ಬನಿಲ್ಲ ಎನ್ನುತ್ತಿದೆ. ಮಾರ್ಗಮಧ್ಯದಲ್ಲಿ ಕೆಲವೆಡೆ ಉತ್ತಮರು ಅನಂತರ ಅಧಮರನ್ನು ಹೊಂದಿದರೂ ಅಂತಿಮಪ್ರಾಪ್ಯನು ಮಾತ್ರ ಬ್ರಹ್ಮಪ್ರಾಪಕನಾದ ಉತ್ತಮದೇವತೆಯೇ ಇರಬೇಕು. ಆದ್ದರಿಂದ ಮುಖ್ಯಪ್ರಾಣನೇ ಅಂತಿಮಪ್ರಾಪ್ಯ ಹೊರತಾಗಿ ಮಧ್ಯದಲ್ಲಿ ಮತ್ತೊಬ್ಬನನ್ನು ಕಲ್ಪಿಸಬಾರದು.

## 6. ಕಾರ್ಯಾಧಿಕರಣ

ಈ ಅಧಿಕರಣದಲ್ಲಿ ಒಟ್ಟು ಹತ್ತು ಸೂತ್ರಗಳಿವೆ.

**1. ಓಂ ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ ಓಂ**
**2. ಓಂ ವಿಶೇಷಿತತ್ವಾಚ್ಚ ಓಂ**
**3. ಓಂ ಸಾಮೀಪ್ಯಾತ್ತು ತದ್ವ್ಯಪದೇಶಃ ಓಂ**
**4. ಓಂ ಕಾರ್ಯಾತ್ಯಯೇ ತದಧ್ಯಕ್ಷ್ಯೇಣ ಸಹಾತಾಃ ಪರಮಭಿಧಾನಾತ್ ಓಂ**
**5. ಓಂ ಸ್ಮೃತೇಶ್ಚ ಓಂ**
**6. ಓಂ ಪರಂ ಜೈಮಿನಿರ್ಮುಖ್ಯತ್ವಾತ್ ಓಂ**
**7. ಓಂ ದರ್ಶನಾಚ್ಚ ಓಂ**
**8. ಓಂ ನ ಚ ಕಾರ್ಯೇ ಪ್ರತಿಪತ್ತ್ಯಭಿಸಂಧಿಃ ಓಂ**
**9. ಓಂ ಅಪ್ರತೀಕಾಲಂಬನಾನ್ನಯತೀತಿ ಬಾದರಾಯಣ ಉಭಯಥಾ ಚ ದೋಷಾತ್ ತತ್ಕ್ರತುಶ್ಚ ಓಂ**
**10. ಓಂ ವಿಶೇಷಂ ಚ ದರ್ಶಯತಿ ಓಂ**

ಈ ಅಧಿಕರಣದಲ್ಲಿ ವಾಯುವು ವ್ಯಾಪ್ತೋಪಾಸಕರನ್ನು ಮುಖ್ಯಬ್ರಹ್ಮನ ಬಳಿಗೂ ಉಳಿದವರನ್ನು ಕಾರ್ಯಬ್ರಹ್ಮನ ಬಳಿಗೂ ಒಯ್ಯುವರು ಎಂದು ಹೇಳಲಾಗಿದೆ.

'ಸ ಏನಾನ್ ಬ್ರಹ್ಮ ಗಮಯತಿ' ಎಂಬ ಶ್ರುತಿಯಲ್ಲಿ ಹೇಳಿದ ಬ್ರಹ್ಮನೇ ಇಲ್ಲಿ ವಿಷಯ. ಅವನು ಚತುರ್ಮುಖಬ್ರಹ್ಮನೋ ಪರಬ್ರಹ್ಮನೋ ಅಥವಾ ಇಬ್ಬರೂ ಆಗುವರೋ ಎಂದು ಸಂಶಯ. ಬ್ರಹ್ಮಶಬ್ದವು ಸಂಶಯಕ್ಕೆ ಕಾರಣ. ಮೂರನೇ ಪಕ್ಷದಲ್ಲಿಯೂ ಒಂದೇ ಕಾಲದಲ್ಲಿ ಒಬ್ಬನೇ ಜ್ಞಾನಿಗೆ ಇಬ್ಬರು ಬ್ರಹ್ಮರ ಪ್ರಾಪ್ತಿಯು ಯುಕ್ತವಾಗುವುದಿಲ್ಲ. ಆದ ಕಾರಣ ಕೆಲವರನ್ನು ಕಾರ್ಯಬ್ರಹ್ಮನನ್ನು ಹೊಂದಿಸುವನು. ಕೆಲವರನ್ನು ಪರಬ್ರಹ್ಮನನ್ನು ತಲುಪಿಸುವನು ಎಂದು ಅಭಿಪ್ರಾಯ. ಯಾವುದಾದರೂ ಕ್ರಮದಿಂದ ಉಭಯಪ್ರಾಪ್ತಿಯೋ ಅಥವಾ ಕ್ರಮವಿಲ್ಲದೇ ಉಭಯಪ್ರಾಪ್ತಿಯೋ ಕ್ರಮವಾದರೂ ಯೋಗ್ಯತಾರೂಪವೋ ಅಥವಾ ಅದಕ್ಕಿಂತ ಭಿನ್ನವಾದುದೋ ಎಂದು ಸಂಶಯ.

ಅರ್ಚಿರಾದಿ ಮಾರ್ಗದಿಂದ ತೆರಳಿದ ಬ್ರಹ್ಮಜ್ಞಾನಿಗಳಿಗೆ ಚತುರ್ಮುಖಬ್ರಹ್ಮನ ಪ್ರಾಪ್ತಿಯೇ ಹೊರತಾಗಿ ಪರಬ್ರಹ್ಮನ ಪ್ರಾಪ್ತಿಯಿಲ್ಲ. 'ಋತೇ ದೇವಾನ್ ಪರಂ ಬ್ರಹ್ಮ ಕಃ ಪುಮಾನ್ ಪ್ರಾಪ್ನುಯಾತ್ ಕ್ವಚಿತ್' ಎಂಬ ಪ್ರಮಾಣವಾಕ್ಯದಂತೆ ದೇವತೆಗಳಿಗೆ ಮಾತ್ರ ಪರಬ್ರಹ್ಮನ ಪ್ರಾಪ್ತಿ ಇತರ ಜ್ಞಾನಿಗಳು ಕರ್ಮದಿಂದ ಬದ್ಧರಾದ್ದರಿಂದ ಅವರಿಗೆ ಪರಬ್ರಹ್ಮನ ಪ್ರಾಪ್ತಿಯು ಯುಕ್ತವಲ್ಲ. ಆದ್ದರಿಂದ 'ಸ ಏನಾನ್ ಬ್ರಹ್ಮ ಗಮಯತಿ' ಎಂಬ ಶ್ರುತಿಯಲ್ಲಿರುವ ಬ್ರಹ್ಮಶಬ್ದಕ್ಕೆ ಅಮುಖ್ಯಾರ್ಥವನ್ನು ಹೇಳಬೇಕು. ಮುಕ್ತಿಪರ್ಯಂತ ಯಾರಿಗೂ ಪರಬ್ರಹ್ಮನ ಪ್ರಾಪ್ತಿಯೇ ಇಲ್ಲ. ಅರ್ಚಿರಾದಿಮಾರ್ಗದಿಂದ ತೆರಳಿದ ಜ್ಞಾನಿಗಳಿಗೆ ಕೇವಲ ಚತುರ್ಮುಖನ ಪ್ರಾಪ್ತಿಯೆಂದು ಬಾದರಿ ಆಚಾರ್ಯರು ಭಾವಿಸುವರು.

'ಸ ಏನಾನ್ ಬ್ರಹ್ಮ ಗಮಯತಿ' ಎಂಬ ಶ್ರುತಿಯಲ್ಲಿರುವ ಬ್ರಹ್ಮಶಬ್ದವು ಪರಬ್ರಹ್ಮನಲ್ಲಿಯೇ ಮುಖ್ಯವಾಗಿದೆ. ಮುಖ್ಯಾರ್ಥವನ್ನು ಸ್ವೀಕರಿಸಲು ಬಾಧಕವಿಲ್ಲ ಆದ್ದರಿಂದ ವಾಯುವು ಪರಬ್ರಹ್ಮನನ್ನು ಹೊಂದಿಸುತ್ತಾನೆ ಎಂದೇ ಶ್ರುತಿಯ ಅರ್ಥವೆಂದು ಜೈಮಿನಿ ಆಚಾರ್ಯರು ಅಭಿಪ್ರಾಯ ಪಡುತ್ತಾರೆ.

ವಾಯುವು ಜ್ಞಾನಿಯನ್ನು ಪರಬ್ರಹ್ಮ ಅಪರಬ್ರಹ್ಮರಿಬ್ಬರ ಬಳಿಗೂ ಒಯ್ಯುತ್ತಾನೆ ಎನ್ನುವ ಮೂರನೇ ಪಕ್ಷದಲ್ಲಿ ಕ್ರಮವೇನಿಲ್ಲ. ಯಾರಿಗೆ ಯಾವುದರ ಅಪೇಕ್ಷೆಯೋ ಆ ಅಪೇಕ್ಷೆಯಂತೆ ಪರಬ್ರಹ್ಮಪ್ರಾಪ್ತಿಯೂ ಆಗಬಹುದು. ಅಪರ ಬ್ರಹ್ಮಪ್ರಾಪ್ತಿಯೂ ಆಗಬಹುದು. ಕ್ರಮಕ್ಕೆ ಪ್ರಮಾಣವಿಲ್ಲ. ಕ್ರಮ ಒಪ್ಪಿದರೂ ಅದಕ್ಕೆ ಯೋಗ್ಯತೆ ನಿಯಾಮಕವಾಗುವದಿಲ್ಲ. ಅವರವರ ಸೌಕರ್ಯಕ್ಕನುಗುಣವಾಗಿ ಪರ–ಅಪರಬ್ರಹ್ಮಪ್ರಾಪ್ತಿ ಎಂದು ಹೇಳಬೇಕು.

ಪರಬ್ರಹ್ಮಪ್ರಾಪ್ತಿ ವ್ಯಾಪ್ತೋಪಾಸಕರಿಗೆ ಅಪರಬ್ರಹ್ಮಪ್ರಾಪ್ತಿ ಪ್ರತೀಕಾಲಂಬನರಿಗೆ ಎಂದು ವ್ಯವಸ್ಥೆಯನ್ನೇ ಹೇಳಬೇಕು. ಇಲ್ಲದಿದ್ದರೆ ಎಲ್ಲರಿಗೂ ಪರಬ್ರಹ್ಮಪ್ರಾಪ್ತಿ ಎಲ್ಲರಿಗೂ ಅಪರ ಬ್ರಹ್ಮಪ್ರಾಪ್ತಿ ಎಂಬ ಎರಡೂ ಪಕ್ಷಗಳಿಗೆ ಹಿಂದೆ ಹೇಳಿದ ದೋಷ ಅನಿವಾರ್ಯವಾಗುತ್ತದೆ. ವ್ಯವಸ್ಥೆಯನ್ನು ಹೇಳುವ ಶ್ರುತಿಸಿದ್ಧವಾದ ಪಕ್ಷದಲ್ಲಿ ದೋಷವಿಲ್ಲ. 'ಸ ಯಥಾ ಕಾಮೋ' ಎಂಬ ಶ್ರುತಿಯು ಕೇವಲ ಅಪೇಕ್ಷಾಮಾತ್ರದಿಂದ ಅಥವಾ ಸೌಕರ್ಯಾನುಸಾರ ಪರ ಅಪರಬ್ರಹ್ಮಪ್ರಾಪ್ತಿಯಾಗುವದಿಲ್ಲ. ಹಾಗೆ ಉಪಾಸನೆ ಅಪರೋಕ್ಷಗಳೂ ಆಗಿರಬೇಕು ಎನ್ನುತ್ತದೆ.

ಇತಿ ಚತುರ್ಥಾಧ್ಯಾಯಸ್ಯ ತೃತೀಯಃ ಪಾದಃ

## ಚತುರ್ಥಾಧ್ಯಾಯಸ್ಯ ಚತುರ್ಥಪಾದಃ

ಈ ಪಾದದಲ್ಲಿ ಒಟ್ಟು ಹನ್ನೊಂದು ಅಧಿಕರಣಗಳು.

1. ಸಂಪದ್ಯಾಧಿಕರಣ
2. ಮುಕ್ತಾಧಿಕರಣ
3. ಆತ್ಮಾಧಿಕರಣ
4. ಅವಿಭಾಗಾಧಿಕರಣ
5. ಚಿತಿಮಾತ್ರಾಧಿಕರಣ
6. ಸಂಕಲ್ಪಾಧಿಕರಣ
7. ಅನನ್ಯಾಧಿಪತಿತ್ವಾಧಿಕರಣ
8. ಉಭಯವಿಧಭೋಗಾಧಿಕರಣ
9. ಸರ್ವಕಾಮಾಧಿಕರಣ
10. ಸ್ಥಿತ್ಯಧಿಕರಣ
11. ಅನಾವೃತ್ತ್ಯಧಿಕರಣ

## 1. ಸಂಪದ್ಯಾಧಿಕರಣ

ಇದು ಏಕ ಸೂತ್ರಾಧಿಕರಣ.

**ಓಂ ಸಂಪದ್ಯಾವಿಹಾಯ ಸ್ವೇನ ಶಬ್ದಾತ್ ಓಂ**

ಇಲ್ಲಿ ಜೀವನು ಪರಮಾತ್ಮನನ್ನು ಹೊಂದಿ ಪರಮಾತ್ಮನನ್ನು ಅತಿಕ್ರಮಿಸದೇ ತನ್ನ ಸ್ವರೂಪದಿಂದಲೇ ಎಲ್ಲ ಭೋಗವನ್ನು ಅನುಭವಿಸುತ್ತಾನೆ.

ಮುಕ್ತನು ಈ ಅಧಿಕರಣದ ವಿಷಯ. ಪರಬ್ರಹ್ಮನನ್ನು ಅತಿಕ್ರಮಿಸಿ ಭೋಗಿಸುವನೋ ಅಥವಾ ಅವನ ಸಮೀಪದಲ್ಲಿಯೇ ಭೋಗಿಸುವನೋ ಎಂದು ಸಂಶಯ. ಅರ್ಚಿರಾದಿ ದೇವತೆಗಳ ಅತಿಕ್ರಮಣವನ್ನು ಹೇಳಿರುವುದು ಭಗವಂತನೇ ಗಮ್ಯನೆಂದು ಹೇಳಿರುವುದು ಸಂಶಯಕ್ಕೆ ಕಾರಣ.

ಮುಕ್ತನು ಪರಬ್ರಹ್ಮನನ್ನು ಅತಿಕ್ರಮಿಸಿ ಭೋಗಗಳನ್ನು ಭೋಗಿಸುವನು. 'ಏತಂ ಸೇತುಂ ತೀರ್ತ್ವಾ ಅಂಧಃ ಸನ್ನನಂಧೋ ಭವತಿ' ಎಂಬ ಶ್ರುತಿಯು ಸಂಸಾರಿಯಾದ ಜೀವನು ಪರಮಾತ್ಮನನ್ನು ಅತಿಕ್ರಮಿಸಿ ದುಃಖಾದಿದೋಷಗಳಿಂದ ರಹಿತನಾಗುವನು ಎಂದು ಹೇಳುತ್ತಿದೆ. ಆದ್ದರಿಂದ ಬ್ರಹ್ಮಾತಿಕ್ರಮಣವಾಗದೇ ಸ್ವರೂಪದ ಅಭಿವ್ಯಕ್ತಿ ಇಲ್ಲ. ಹೀಗೆ ಮುಕ್ತನಿಗೆ ಬ್ರಹ್ಮಾತಿಕ್ರಮಣವಾಗದೇ ಸ್ವರೂಪದ ಅಭಿವ್ಯಕ್ತಿ ಇಲ್ಲ. ಹೀಗೆ ಮುಕ್ತನಿಗೆ ಬ್ರಹ್ಮಾತಿಕ್ರಮಣವು ನಿಯತವಾಗಿರುವುದರಿಂದ ಬ್ರಹ್ಮನು ಗಮ್ಯನಲ್ಲ.

ಜ್ಞಾನಿಯು ಪರಬ್ರಹ್ಮನನ್ನು ಹೊಂದಿ ಅವನನ್ನು ಅತಿಕ್ರಮಿಸದೇ ಅನ್ಯಥಾ ರೂಪವನ್ನು ಪರಿತ್ಯಜಿಸಿ ಸ್ವರೂಪದಿಂದಲೇ ಇದ್ದು ಭೋಗವನ್ನು ಅನುಭವಿಸುವನು. 'ಸ ಯ ಏವಂವಿದೇವಂ ಮನ್ವಾನ ಏವಂ ಪಶ್ಯನ್ನಾತ್ಮಾನಮಭಿಸಂಪದ್ಯೈತೇನಾತ್ಮನಾ ಯಥಾ ಕಾಮಂ ಸರ್ವಾನ್ ಕಾಮಾನನುಭವತಿ' ಮುಕ್ತಿಯೋಗ್ಯನು ಭಗವಂತನ ಜ್ಞಾನವನ್ನು ಪಡೆದು ಅವನ ಅಪರೋಕ್ಷಜ್ಞಾನದಿಂದ ಪರಮಾತ್ಮನನ್ನೇ ಹೊಂದಿ ತನ್ನ ಇಚ್ಛೆಯಂತೆ ಎಲ್ಲ ಭೋಗಗಳನ್ನು ಅನುಭವಿಸುವನು. ಎಂದು ಸೌಪರ್ಣಶ್ರುತಿಯು ಹೇಳುತ್ತದೆ. 'ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' ಪರಮಾತ್ಮನನ್ನು ಹೊಂದಿ ಮುಕ್ತನು ಸ್ವರೂಪದಿಂದಲೇ ಇರುತ್ತಾನೆ. ಎಂದೂ ಛಾಂದೋಗ್ಯಶ್ರುತಿಯು ಹೇಳುತ್ತಿದೆ. ಇದರಿಂದ ಮುಕ್ತನು ಪರಮಾತ್ಮನನ್ನು ಎಂದಿಗೂ ಮೀರುವದಿಲ್ಲ ಎಂದು ಸಿದ್ಧವಾಗುತ್ತದೆ. 'ಏತಂ ಸೇತುಂ ತೀರ್ತ್ವಾ' ಎಂಬ ಶ್ರುತಿಯ ವಿರೋಧವಿಲ್ಲ. ಆ ಶ್ರುತಿಯು ಬ್ರಹ್ಮನ ಅತಿಕ್ರಮಣವನ್ನು ಹೇಳುವದಿಲ್ಲ. ಬ್ರಹ್ಮನನ್ನು ಹೊಂದಲು ಸಂಸಾರದ ತರಣವನ್ನು ಆ ಶ್ರುತಿಯು ಹೇಳುತ್ತದೆ. 'ಇಮಾಂ ಘೋರಾಮಶಿವಾಂ ನದೀಂ ತೀರ್ತ್ವೈತಂ ಸೇತುಮಾಪ್ಯೈತೇನೈವ ಸೇತುನಾ ಮೋದತೇ ಪ್ರಮೋದತ ಆನಂದೀ ಭವತಿ' ಜ್ಞಾನಿಯು ಅಮಂಗಳವಾದ ಕ್ರೂರವಾದ ಸಂಸಾರವನ್ನು ದಾಟಿ ಪರಮಾತ್ಮನನ್ನು ಹೊಂದಿ ಅವನಿಂದಲೇ ಆನಂದವನ್ನು ಅನುಭವಿಸುವನು ಎಂದು ವಿಶೇಷಶ್ರುತಿಯಿದೆ. ಈ ವಿಶೇಷ ಶ್ರುತಿಗನುಸಾರವಾಗಿ 'ಏತಂ ಸೇತುಂ ತೀರ್ತ್ವಾ' ಎಂಬ ಸಾಮಾನ್ಯ ಶ್ರುತಿಗೆ ಅರ್ಥವನ್ನು ಮಾಡಬೇಕು. 'ಏತಂ ಸೇತುಂ ಪ್ರತಿ ಪುಮಾನನ್ಯತ್ತೀರ್ತ್ವಾ ಹೃದ್ದೋಷವಾನ್' ಎಂದು ಸ್ಮೃತಿಯೂ ಇದೆ. ಆದ್ದರಿಂದ ಮುಕ್ತನಿಗೆ ಬ್ರಹ್ಮಾತಿಕ್ರಮಣವಿಲ್ಲವಾದ ಕಾರಣ ಬ್ರಹ್ಮನೇ ಗಮ್ಯನಾಗಿದ್ದಾನೆ.

## 2. ಮುಕ್ತಾಧಿಕರಣ

ಇದು ಏಕಸೂತ್ರಾಧಿಕರಣ.

**ಓಂ ಮುಕ್ತಃ ಪ್ರತಿಜ್ಞಾನಾತ್ ಓಂ**

ಈ ಅಧಿಕರಣದಲ್ಲಿ ಪರಮಾತ್ಮನನ್ನು ಹೊಂದಿ ಭೋಗವನ್ನು ಅನುಭವಿಸುತ್ತಾನೆ ಎಂದು ಹೇಳಲ್ಪಟ್ಟವನು ಮುಕ್ತನೇ.

'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ' ಈ ಶ್ರುತಿಯಿಂದ ಪ್ರತಿಪಾದ್ಯನಾದವನೇ ವಿಷಯ. ಅವನು ಯಾರು ? ಮುಕ್ತನೋ ಅಥವಾ ಅಮುಕ್ತನೋ ಎಂದು ಸಂಶಯ. ಆ ಶ್ರುತಿಯಲ್ಲಿ ಹೇಳಿರುವ ಕ್ರೀಡಾದಿಗಳನ್ನು ಇಬ್ಬರಿಗೂ ಹೇಳಬಹುದು. ಅಸಾಧಾರಣವಾದ ಲಿಂಗಗಳಲ್ಲ ಆದ್ದರಿಂದ ಸಂಶಯ.

'ಸ ತತ್ರ ಪರ್ಯೇತಿ' ಎಂಬಲ್ಲಿ ಕ್ರೀಡಾದಿಗಳು ಶ್ರುತವಾಗಿವೆ. ಮುಕ್ತನು ಕೃತಕೃತ್ಯನಾದ್ದರಿಂದ ಅವನಿಗೆ ಕ್ರೀಡಾದಿಗಳು ಯುಕ್ತವಲ್ಲ. ಅಮುಕ್ತನಿಗೂ ಇಂತಹ ಕ್ರೀಡಾದಿಗಳು ಅಸಂಭಾವಿತ ಎನ್ನಬಾರದು. ಅವನಿಗೆ ಬೇರೆ ಸಮಯದಲ್ಲಿ ಅಸಂಭಾವಿತವಾದರೂ ಭಗವತ್ಪ್ರಾಪ್ತ್ಯನಂತರ ಸಂಭಾವಿತವಾಗಿದೆ. 'ಸ ತತ್ರ ಪರ್ಯೇತಿ' ಅಮುಕ್ತನಾದಲ್ಲಿ 'ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬಲ್ಲಿ ಹೇಳಿದ ಸ್ವರೂಪದಿಂದ ಅವಸ್ಥಾನವು ಇಲ್ಲದಿರುವದರಿಂದ ಆ ಶ್ರುತಿಯ ವಿರೋಧವು ಉಂಟಾಗುತ್ತದೆ ಎನ್ನುವದು ಸರಿಯಲ್ಲ.'ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬ ಶ್ರುತಿಯಲ್ಲಿ ನಿರ್ಗುಣೋಪಾಸಕನಿಗೆ ಸ್ವರೂಪದ ಅಭಿವ್ಯಕ್ತಿಯನ್ನು ಹೇಳಿರುವುದು. ಸ ತತ್ರ ಎಂಬ ಶ್ರುತಿಯಲ್ಲಿ ದಹರವಿದ್ಯೋಪಾಸಕನಾದ ಅಮುಕ್ತನ ಭೋಗವನ್ನೇ ಹೇಳಿರುವುದು. ಇದು ಅಮುಕ್ತಪ್ರಕರಣವಾಗಿದೆ. ಹೀಗೆ 'ಸ ತತ್ರ ಪರ್ಯೇತಿ' ಎಂಬ ಶ್ರುತಿಯಲ್ಲಿ ಪ್ರತಿಪಾದ್ಯನು ಅಮುಕ್ತನೇ ಆಗಿದ್ದಾನೆ. ಆದ್ದರಿಂದ ಮುಕ್ತನಿಗೆ ಭೋಗವಿಲ್ಲ.

ಸ ತತ್ರ ಪರ್ಯೇತಿ ಎಂಬ ಶ್ರುತಿಯಿಂದ ಪ್ರತಿಪಾದ್ಯನು ಮುಕ್ತನೇ ಆಗಿದ್ದಾನೆ. ಏಕೆಂದರೆ ಮುಕ್ತನಲ್ಲದವನಿಗೆ ಇಲ್ಲಿ ಹೇಳಿರುವ ಭೋಗವು ಸಂಭಾವಿತವಲ್ಲ. 'ಅಹರಹರೇನಮನುಪ್ರವಿಶತ್ಯುಪಸಂಕ್ರಮೇ ಚ ನ ತತ್ರ ಮೋದತೇ ನ ಪ್ರಮೋದತೇ ನ ಕಾಮಾನನುಭವತಿ ಬದ್ಧೋ ಹ್ಯೇಷ ತದಾ ಭವತ್ಯಥ ಯದೈನಂ ಮುಕ್ತೋ ಅನುಪ್ರವಿಶತಿ ಮೋದತೇ ಚ ಪ್ರಮೋದತೇ ಚ ಕಾಮಾಂಶ್ಚೈವಾನುಭವತಿ 'ಅಮುಕ್ತನು ಸುಷುಪ್ತ್ಯವಸ್ಥೆಯಲ್ಲಿ ಪ್ರತಿದಿನವೂ ಭಗವಂತನನ್ನು ಪ್ರವೇಶಿಸುತ್ತಾನೆ. ಆದರೆ ಕರ್ಮದಿಂದ ಬಂಧಿತನಾದ ಕಾರಣ ಮೋದ ಪ್ರಮೋದಗಳ ಅನುಭವ ಅವನಿಗಾಗುವದಿಲ್ಲ. ಮುಕ್ತನಾದ ನಂತರ ಭಗವಂತನನ್ನು ಪ್ರವೇಶಿಸಿ ಮೋದ ಪ್ರಮೋದಗಳನ್ನು ಅನುಭವಿಸುವನು. ತನ್ನ ಅಭೀಷ್ಟಗಳನ್ನು ಈಡೇರಿಸಿಕೊಳ್ಳುವನು ಎಂದು ಶ್ರುತಿಯಲ್ಲಿ ಅಮುಕ್ತನಿಗೆ ಬ್ರಹ್ಮಪ್ರಾಪ್ತಿಯಾದರೂ ಸುಷುಪ್ತ್ಯವಸ್ಥೆಯಲ್ಲಿ ದಿವ್ಯಭೋಗವಿಲ್ಲ ಎಂದು ಹೇಳಲಾಗಿದೆ. ಮುಕ್ತನಿಗೆ ಆ ಭೋಗಗಳಿವೆ ಎಂದು ಹೇಳಲ್ಪಟ್ಟಿದೆ. ಇದರಿಂದ ಅಮುಕ್ತನಿಗೆ ಬ್ರಹ್ಮಪ್ರಾಪ್ತಿಯಿಂದಲೂ ಭೋಗವಿಲ್ಲವೆಂದು ಸಿದ್ಧವಾಗುತ್ತದೆ. ಮುಕ್ತಕ್ರಿಯಾರಹಿತನೆನ್ನುವುದು ಹಿಂದೆ ಹೇಳಿದ ಶ್ರುತಿಯಿಂದ ವಿರುದ್ಧವಾಗಿದೆ.

## 3. ಆತ್ಮಾಧಿಕರಣ

ಇದು ಏಕಾಸೂತ್ರಾಧಿಕರಣ. ಇಲ್ಲಿ ಮುಕ್ತಪ್ರಾಪ್ಯನಾದ ಪರಂಜ್ಯೋತಿಯು ಪರಮಾತ್ಮನೇ ಎಂದು ಹೇಳಲಾಗಿದೆ.

'ಪರಂ ಜ್ಯೋತಿರುಪಸಂಪದ್ಯ' ಎಂಬಲ್ಲಿ ಹೇಳಿದ ಜ್ಯೋತಿಯು ವಿಷ್ಣುವಲ್ಲ. 'ಸೂರ್ಯಮಗನ್ಮಜ್ಯೋತಿಃ' ಮುಂತಾದ ವಾಕ್ಯಗಳಲ್ಲಿ ಸೂರ್ಯನಲ್ಲಿ ಜ್ಯೋತಿಶಬ್ದದ ಪ್ರವೃತ್ತಿಯಿದೆ. 'ಸ ತೇಜಸಿ ಸೂರ್ಯೇ ಸಂಪನ್ನೋ ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತೇ ಏವಂ ಹ್ಯೇವ ಸ ಪಾಪ್ಮನಾ ವಿನಿರ್ಮುಕ್ತಃ' ಎಂದು ಶ್ರುತಿಯಲ್ಲಿ ಸರ್ಪವು ತನ್ನ ಪೊರೆಯನ್ನು ಬಿಡುವಂತೆ ಜ್ಞಾನಿಯು ಸೂರ್ಯನನ್ನು ಹೊಂದಿ ಪಾಪದಿಂದ ಮುಕ್ತನಾಗುತ್ತಾನೆ ಎಂದು ಸಮಾಖ್ಯಾ ಇರುವುದರಿಂದ ಪರಂ ಜ್ಯೋತಿರುಪಸಂಪದ್ಯ ಎಂಬ ಶ್ರುತಿಯಲ್ಲಿಯೂ ಸಹ ಸೂರ್ಯನನ್ನು ಹೊಂದಿ ಸ್ವರೂಪದ ಅಭಿವ್ಯಕ್ತಿಯನ್ನು ಹೊಂದುತ್ತಾನೆ ಎಂದು ಅರ್ಥಹೇಳಿದಾಗ ಏಕಾರ್ಥತಾ ಲಾಭರೂಪ ಪ್ರಯೋಜನವಿದೆ. ಆದ್ದರಿಂದ ಜ್ಯೋತಿಃಶಬ್ದವು ಸೂರ್ಯವಾಚಕವಾಗಿದೆ. ಆದಕಾರಣ ಮುಕ್ತನಿಗೆ ಬ್ರಹ್ಮಸಮೀಪದಲ್ಲಿ ಭೋಗವಿಲ್ಲ.

ಪರಂ ಜ್ಯೋತಿಃ ಶಬ್ದದಿಂದ ಪರಮಾತ್ಮನೇ ವಾಚ್ಯನಾಗಿದ್ದಾನೆ. ಯ ಆತ್ಮಾ ಅಪಹತಪಾಪ್ಮಾ ಎಂದು ಭಗವಂತನೇ ಇಲ್ಲಿ ಪ್ರಸ್ತುತನಾದ್ದರಿಂದ ಇದು ಭಗವತ್ಪ್ರಕರಣ. ಪ್ರಕರಣವು ಸಮಾಖ್ಯಾಗಿಂತಲೂ ಪ್ರಬಲ. 'ಸ ತೇಜಸಿ ಸೂರ್ಯೇ ಸಂಪನ್ನೋ ಯಥಾ ಪಾದೋದರಃ' ಈ ಸಮಾಖ್ಯಾಶ್ರುತಿಯು ಬ್ರಹ್ಮಪ್ರಾಪ್ತಿಮಾರ್ಗದಲ್ಲಿ ಸೂರ್ಯಮಂಡಲವನ್ನು ಹೊಂದಿ ಪ್ರಾರಬ್ಧಕರ್ಮದಿಂದ ಬಿಡುಗಡೆಯನ್ನು ಹೊಂದುವನು ಎಂದು ಪರಮಾತ್ಮನನ್ನು ಹೊಂದುವ ಪೂರ್ವದಲ್ಲಿ ಸೂರ್ಯನ ಪ್ರಾಪ್ತಿಯನ್ನು ಹೇಳುತ್ತಿದೆ. ಆದ್ದರಿಂದ ಈ ಶ್ರುತಿಯು ಸಾವಕಾಶವೂ ಆಗಿದೆ. 'ಪರಂ ಜ್ಯೋತಿಃ ಪರಂ ಬ್ರಹ್ಮ ಪರಮಾತ್ಮಾದಿಕಾ ಗಿರಃ ಸರ್ವತ್ರ ಹರಿಮೇವೈಕಂ ಬ್ರೂಯುಃ ನಾನ್ಯಂ ಕಥಂಚನ' ಎಂಬ ಸ್ಮೃತಿಯಂತೆ ಪರಂಜ್ಯೋತಿಃ ಶಬ್ದವು ಪರಮಾತ್ಮನಲ್ಲೇ ಮುಖ್ಯವಾಗಿದೆ. ಆದಕಾರಣ ಪರಂಜ್ಯೋತಿಃಶಬ್ದವು ಪರಮಾತ್ಮವಾಚಕವೇ ಆಗಿದೆ. ಪರಮಾತ್ಮನ ಸಮೀಪದಲ್ಲಿ ಮುಕ್ತನಿಗೆ ಭೋಗವೆಂಬುದು ಯುಕ್ತವೇ ಆಗಿದೆ.

## 4. ಅವಿಭಾಗಾಧಿಕರಣ

ಇದು ಏಕಸೂತ್ರಾಧಿಕರಣ

ಇಲ್ಲಿ ಪರಮಾತ್ಮನನ್ನು ಪ್ರವೇಶಿಸಿದ ಜೀವನು ಪರಮಾತ್ಮ ಅನುಭವಿಸಿದ ಭೋಗಗಳನ್ನೇ ಅನುಭವಿಸುತ್ತಾನೆ.

ಮುಕ್ತರ ಭೋಗವೇ ವಿಷಯ. ಸಾಯುಜ್ಯಮುಕ್ತರು ಪರಮಾತ್ಮನಿಂದ ಭೋಗಿಸಲ್ಪಟ್ಟ ಭೋಗಗಳನ್ನೇ ಅನುಭವಿಸುವರೋ ಅಥವಾ ಇತರ ಭೋಗಗಳನ್ನು ಕೂಡ ಭೋಗಿಸುವರೋ ಎಂದು ಸಂಶಯ. ಎರಡೂ ರೀತಿ ಸಂಭವವಿರುವುದರಿಂದ ಸಂಶಯ.

ಸಾಯುಜ್ಯಮುಕ್ತರು ಪರಮಾತ್ಮನಿಂದ ಭೋಗಿಸಲ್ಪಡದ ಭೋಗಗಳನ್ನು ಕೂಡ ಅನುಭವಿಸುವರು. ಮೋಕ್ಷದಲ್ಲಿ ದೊರೆಯದಿರುವ ಭೋಗವೇ ಇಲ್ಲ. ಪರಮಾತ್ಮನು ನಿತ್ಯದಲ್ಲೂ ಆನಂದಪೂರ್ಣ. ಆದ್ದರಿಂದ ಕೆಲವೊಮ್ಮೆ ಅವನಿಗೆ ಭೋಗ ಮಾಡದಿರುವುದು ಸಂಭಾವಿತ. ಪರಮಾತ್ಮನಿಂದ ಭುಕ್ತವಾದ ಭೋಗವನ್ನೇ ಮುಕ್ತನು ಅನುಭವಿಸುವನು ಎಂದಾಗ ಮುಕ್ತನಿಗೆ ಭೋಗಿಸುವ ಇಚ್ಛೆ ಇದ್ದರೂ ಪರಮಾತ್ಮನು ಭೋಗಿಸದಿರುವಾಗ ಮುಕ್ತನಿಗೂ ಭೋಗವಿಲ್ಲದಂತಾಗುವುದು. ಇದರಿಂದ ಮೋಕ್ಷವು ಪುರುಷಾರ್ಥವಾಗದೇ ಹೋಗಬೇಕಾಗುತ್ತದೆ. ಆದಕಾರಣ ಪರಮಾತ್ಮನಿಂದ ಭೋಗಿಸಲ್ಪಡದ ಭೋಗವನ್ನೂ ಮುಕ್ತನು ಭೋಗಿಸುವನು ಎಂದು ಹೇಳಬೇಕು ಎಂದು ಪೂರ್ವಪಕ್ಷ.

ಪರಮಾತ್ಮನಿಂದ ಭೋಗಿಸಲ್ಪಡದ ಭೋಗಗಳು ಸಾಯುಜ್ಯಮುಕ್ತರಿಂದ ಭೋಗಿಸಲ್ಪಡುವುದಿಲ್ಲ. ಮೋಕ್ಷದಲ್ಲಿ ಸಮಸ್ತಭೋಗಗಳು ಸುಲಭವಾಗಿದ್ದರೂ ಭಗವಂತನಿಂದ ಭುಕ್ತವಾದ ಭೋಗಗಳನ್ನು ಮಾತ್ರ ಮುಕ್ತರು ಭೋಗಿಸುವರು. 'ಯಾನೇವಾಹಂ ಶೃಣೋಮಿ ಯಾನ್ ಪಶ್ಯಾಮಿ ಯಾನ್ ಜಿಘ್ರಾಮಿ ತಾನೇವೈತೇ ಇದಂ ಶರೀರಂ ವಿಮುಚ್ಯಾನುಭವಂತಿ' ಯಾವುದನ್ನು ನಾನು ಕೇಳುವೆನೋ ಯಾವುದನ್ನು ನೋಡುವೆನೋ ಯಾವುದನ್ನು ಆಘ್ರಾಣಿಸುವೆನೋ ಅವುಗಳನ್ನೇ ಜಡಶರೀರವನ್ನು ಪರಿತ್ಯಜಿಸಿದ ಮುಕ್ತರೂ ಅನುಭವಿಸುವರು ಎಂದು ಶ್ರುತಿಯು ಪ್ರತಿಪಾದಿಸುತ್ತಿದೆ. ಈಶ್ವರನಿಗೆ ಭೋಗವಿಲ್ಲದಿರುವಿಕೆಯೇ ಇಲ್ಲ. 'ಪೂರ್ಣಾನಂದಃ ಪೂರ್ಣಭುಕ್ ಪೂರ್ಣಕರ್ತಾ' ಎಂಬ ಶ್ರುತಿಯು ಪೂರ್ಣಭುಕ್ ಎನ್ನುತ್ತಿದೆ. ಪರಮಾತ್ಮನು ಪೂರ್ಣಾನಂದನಾಗಿದ್ದರೂ ಪೂರ್ಣವಾದ ಭೋಗವನ್ನು ಅನುಭವಿಸುವನು. ಭಗವಂತನಿಂದ ಭುಕ್ತವಾದ ಸಮಸ್ತಭೋಗಗಳನ್ನೂ ಮುಕ್ತರು ಭೋಗಿಸುವುದೆಂದಲ್ಲ ಕೆಲವೊಂದು ಭೋಗಗಳನ್ನು ಮಾತ್ರ ಅಲ್ಪವಾಗಿ ಭೋಗಿಸುವರು. ಆದ್ದರಿಂದ ಭಗವಂತನಿಂದ ಮುಕ್ತರಿಗೆ ಸಾಮ್ಯವಿಲ್ಲ. ಆದ್ದರಿಂದ ಭಗವಂತನಿಗೆ ಸರ್ವಭೋಕ್ತೃತ್ವವು ನಿಶ್ಚಯವಾಗಿದೆ.

## 5. ಚಿತಿಮಾತ್ರಾಧಿಕರಣ

ಈ ಅಧಿಕರಣದಲ್ಲಿ ಒಟ್ಟು ಮೂರು ಸೂತ್ರಗಳಿವೆ.

1. **ಓಂ ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ಓಂ**
2. **ಓಂ ಚಿತಿಮಾತ್ರೇಣ ತದಾತ್ಮಕತ್ವಾದಿತ್ಯೌಡುಲೋಮಿಃ ಓಂ**
3. **ಓಂ ಏವಮಪ್ಯುಪನ್ಯಾಸಾತ್ ಪೂರ್ವಭಾವಾದವಿರೋಧಂ ಬಾದರಾಯಣಃ ಓಂ**

ಪರಮಾತ್ಮನನ್ನು ಪ್ರವೇಶಿಸಿದ ಜೀವನು ತನ್ನ ಸ್ವರೂಪದಿಂದಲೂ ಪರಮಾತ್ಮನ ದೇಹದಿಂದಲೂ ಭೋಗವನ್ನು ಅನುಭವಿಸುತ್ತಾನೆ.

ಇಲ್ಲಿ ಭೋಗವೇ ವಿಷಯ. ಮುಕ್ತನಿಗೆ ಅದು ಯುಕ್ತವೋ ಅಥವಾ ಅಯುಕ್ತವೋ ಎಂದು ಸಂಶಯ. ವಾದಿ ಪ್ರತಿವಾದಿಗಳ ವಿವಾದವೇ ಸಂಶಯಕ್ಕೆ ಕಾರಣ.

ಭೋಗಕ್ಕೆ ಕಾರಣವಾದದ್ದು ದೇಹ. ಮುಕ್ತರು ಸಂಸಾರರಹಿತರಾದ್ದರಿಂದ ಅವರಿಗೆ ದೇಹವೇ ಇಲ್ಲ. ದೇಹವಿದೆ ಎಂದರೆ ಮುಕ್ತರಾಗಲು ಸಾಧ್ಯವಿಲ್ಲ. ಹೀಗೆ ದೇಹವಿಲ್ಲದಿರುವದರಿಂದ ಭೋಗವು ಅಸಂಭಾವಿತ. ಆದ್ದರಿಂದ ಮೋಕ್ಷವು ಪುರುಷಾರ್ಥವಲ್ಲ.

ಮುಕ್ತರಿಗೆ ಬ್ರಹ್ಮಾತಿರಿಕ್ತ ಸ್ಥೂಲ ಸೂಕ್ಷ್ಮದೇಹವಿಲ್ಲದಿದ್ದರೂ ಪರಮಾತ್ಮನನ್ನು ಪ್ರವೇಶಿಸಿದ ಅವರಿಗೆ ಪರಮಾತ್ಮನ ದೇಹದಿಂದಲೇ ಭೋಗಾನುಭವವಾಗುತ್ತದೆಂದು ಜೈಮಿನಿ ಆಚಾರ್ಯರ ಅಭಿಪ್ರಾಯ. ಈ ವಿಷಯದಲ್ಲಿ ಶ್ರುತಿಯೇ ಪ್ರಮಾಣ. 'ಸ ವಾ ಏಷ ಬ್ರಹ್ಮನಿಷ್ಠ ಇದಂ ಶರೀರಂ ಮರ್ತ್ಯಮತಿಸೃಜ್ಯ ಬ್ರಹ್ಮಾಭಿಸಂಪದ್ಯ ಬ್ರಹ್ಮಣಾ ಪಶ್ಯತಿ ಬ್ರಹ್ಮಣಾ ಶೃಣೋತಿ ಬ್ರಹ್ಮಣೈವೇದಂ ಸರ್ವಮನುಭವತಿ' ಬ್ರಹ್ಮಜ್ಞಾನಿಯು ಮರಣಶೀಲವಾದ ಈ ದೇಹಗಳನ್ನು ಪರಿತ್ಯಜಿಸಿ ಪರಮಾತ್ಮನನ್ನು ಹೊಂದಿ ಅವನ ದೇಹದಿಂದಲೇ ನೋಡುತ್ತಾನೆ ಕೇಳುತ್ತಾನೆ ಎಲ್ಲ ಭೋಗವನ್ನು ಅನುಭವಿಸುತ್ತಾನೆ ಎಂದು ಶ್ರುತಿಯು ಪ್ರತಿಪಾದಿಸುತ್ತದೆ.

'ಆದತ್ತೇ ಹರಿಹಸ್ತೇನ ಹರಿದೃಷ್ಟ್ಯೈವ ಪಶ್ಯತಿ ಗಚ್ಛೇಚ್ಚ ಹರಿಪಾದೇನ ಮುಕ್ತಸ್ಯೈಷಾ ಸ್ಥಿತಿರ್ಭವೇತ್' ಪರಮಾತ್ಮನ ಹಸ್ತದಿಂದಲೇ ಸ್ವೀಕರಿಸುವನು ಭಗವಂತನ ಕಣ್ಣಿನಿಂದಲೇ ಕಾಣುವನು. ಭಗವಂತನ ಪಾದದಿಂದಲೇ ನಡೆದಾಡುವನು. ಮುಕ್ತನಿಗೆ ಇಂತಹ ಸ್ಥಿತಿಯು ದೊರೆಯುವದು ಎಂದು ಸ್ಮೃತಿಯೂ ಸಹ ಹೇಳುತ್ತಿದೆ. 'ಗಚ್ಛಾಮಿ ವಿಷ್ಣುಪಾದಾಭ್ಯಾಂ ವಿಷ್ಣುದೃಷ್ಟ್ಯಾ ಚ ದರ್ಶನಮ್' ಇತ್ಯಾದಿ 'ಪೂರ್ವಸ್ಮರಣಾನುಕ್ತ-ಸ್ಯೈತದ್ ಭವಿಷ್ಯತಿ' ಮುಕ್ತಿಯಲ್ಲಿ ವಿಷ್ಣುವಿನ ಪಾದದಿಂದ ನಡೆಯುತ್ತೇನೆ ವಿಷ್ಣುವಿನ ಕಣ್ಣಿನಿಂದ ಕಾಣುತ್ತೇನೆ ಎಂದು ಉಪಾಸನೆ ಮಾಡಿದ್ದರಿಂದ ಮುಕ್ತನಾದಾಗ ಅಂತಹ ಫಲವೇ ಲಭಿಸುವುದು. ಎಂದು ಸ್ಮೃತಿಯಲ್ಲಿ ಯುಕ್ತಿಯೂ ಸೂಚಿತವಾಗಿದೆ. ಹೀಗೆ ಮುಕ್ತನಿಗೆ ತನ್ನ ದೇಹವಿಲ್ಲದಿದ್ದರೂ ಗ್ರಹದಂತೆ ಪರಮಾತ್ಮನ ದೇಹದಿಂದ ಭೋಗವು ಯುಕ್ತವೇ ಆಗಿದೆ.

## 6. ಸಂಕಲ್ಪಾಧಿಕರಣ

ಇದು ಏಕಾಧಿಕರಣ.

**ಓಂ ಸಂಕಲ್ಪಾದೇವ ಚ ತಚ್ಛ್ರುತೇಃ ಓಂ**

ಮುಕ್ತರ ಭೋಗವು ವಿಷಯ. ಅದು ಪ್ರಯತ್ನಸಾಧ್ಯವಾದ ಸಾಧನದಿಂದ ಸಾಧ್ಯವೋ ಅಥವಾ ಇಚ್ಛಾಮಾತ್ರದಿಂದ ಸಾಧ್ಯವಾದದ್ದೋ? ಎಂದು ಸಂಶಯ. ಲೋಕದಲ್ಲಿ ಭೋಗವು ಸಾಧನಸಾಧ್ಯವಾಗಿದೆ. ಮುಕ್ತಭೋಗವು ಅಲೌಕಿಕವಾಗಿದೆ. ಆದ್ದರಿಂದ ಪ್ರಕೃತದಲ್ಲಿ ಸಂಶಯವು ಉಂಟಾಗುತ್ತದೆ.

ಮುಕ್ತರ ಭೋಗವು ಭಗವಂತನ ಲೋಕದಲ್ಲಿ ಆಗುವುದು ಭಗವಂತನ ಲೋಕಕ್ಕೂ ಪೃಥಿವ್ಯಾದಿಲೋಕಕ್ಕೂ ವ್ಯತ್ಯಾಸವಿಲ್ಲ. ಎರಡೂ ಸ್ಥಳದಲ್ಲಿ ಲೋಕತ್ವವು ಸಮಾನವಾಗಿದೆ. ಈ ಲೋಕದಲ್ಲಿ ಭೋಗವು ಕರ್ಮದಿಂದ ಸಾಧ್ಯವಾದುದು. ಆದ್ದರಿಂದ ಭಗವಂತನ ಲೋಕದಲ್ಲೂ ಭೋಗವು ಕರ್ಮಸಾಧ್ಯ. ಇಲ್ಲದಿದ್ದರೆ ಲೋಕವಿರೋಧವು ಉಂಟಾಗುವುದು. ಹೀಗೆ ಮುಕ್ತಭೋಗವು ಕರ್ಮಸಾಧ್ಯವಾಗಿ ಸಂಸಾರಸಮಾನವಾದ್ದರಿಂದ ಅದು ಪುರುಷಾರ್ಥವೇ ಅಲ್ಲ.

ಮುಕ್ತರ ಭೋಗವು ಉಪಾಯ ಸಾಧ್ಯ ಸಾಧನಸಾಧ್ಯವಲ್ಲ. 'ಸ ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಸ್ತಮುತ್ತಿಷ್ಠಂತೇ' ಮುಕ್ತನು ತನ್ನ ಚರಮಜನ್ಮದ ಪಿತೃಗಳ ದರ್ಶನವನ್ನು ಬಯಸಿದಲ್ಲಿ ಸಾಧನೆಯನ್ನು ಮಾಡಿ ಆ ಪಿತೃಗಳು ಸಂಸಾರದಿಂದ ಮುಕ್ತರಾಗಿ ಅವನ ಮುಂದೆ ನಿಲ್ಲುವರು ಎಂದು ಶ್ರುತಿಯು ಮುಕ್ತನ ಕೇವಲ ಇಚ್ಛೆಯಿಂದಲೇ ಸಮಸ್ತಭೋಗಗಳೂ ಅವನಿಗೆ ದೊರೆಯುವುದೆಂದು ಪ್ರತಿಪಾದಿಸುತ್ತಿವೆ. ಹೀಗೆ ಶ್ರುತಿವಿರೋಧ ಬರುವದರಿಂದ ಲೋಕತ್ವವು ಸಮಾನವಾಗಿದೆ. ಎಂಬ ಯುಕ್ತಿಯು ಸಮಂಜಸವಲ್ಲ. ಭಗವಲ್ಲೋಕವು ನಿರ್ದುಷ್ಟವಾದ್ದರಿಂದ ಅಲ್ಲಿ ಭೋಗವು ಸಂಕಲ್ಪಮಾತ್ರಸಾಧ್ಯವೆಂಬುದು ಯುಕ್ತವೇ ಆಗಿದೆ. ಆದ್ದರಿಂದ ಲೋಕವಿರೋಧವೂ ಇಲ್ಲ. ಹೀಗೆ ಮುಕ್ತಭೋಗವು ಸಂಸಾರ-ಸಮಾನವಲ್ಲವಾದ್ದರಿಂದ ಅದು ಪುರುಷಾರ್ಥವೇ ಆಗಿದೆ.

